## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

325 ಶ್ರೀಮತಿ. ಯು. ಪುಟ್ಟಮ್ಮ ಬಕ್ಕಪ್ಪ,
ಅಕ್ಕಮಹಾದೇವಿ ರೋಡ್,
ದಾವಣಗೆರೆ-2

326 ಶ್ರೀಮತಿ ಎಂ. ಚನ್ನಬಸಪ್ಪ ವೀರಮ್ಮ
ಪೂನ-ಬೆಂಗಳೂರು ರಸ್ತೆ
ದಾವಣಗೆರೆ-2

327 ಶಾಮನೂರು ಶ್ರಿ ಮರುಗಪ್ಪ ಅಂಡ್ ಸನ್
ಜಗಳೂರು ರೋಡ್, ದಾವಣಗೆರೆ

328 ಮಾಗನೂರು ಶ್ರೀ ಬಸಪ್ಪ ಅಂಡ್ ಸನ್.
ಚೌಕಿಪೇಟೆ, ದಾವಣಗೆರೆ.

329 ಪ್ರಿನ್ಸಿಪಾಲರು,
ಎ. ಆರ್. ಜಿ. ಕಾಲೇಜ್ ಆಫ್ ಆರ್ಟ್ಸ ಅಂಡ್
ಕಾಮರ್ಸ್, ದಾವಣಗೆರೆ.

330 ಶ್ರೀ ವೈ. ಎನ್. ಆನಂದರಾವ್
ಪೂರ್ವಾಣಿ ನಗರ, ಬೆಂಗಳೂರು-16

331 ಶ್ರೀ ಡಿ. ಲಿಂಗಯ್ಯ,
ಬೆಂಗಳೂರು ಫೌಂಡ್ರಿ, ಬೆಂಗಳೂರು-39

332 ಶ್ರೀ ಟಿ. ಕೃಷ್ಣಮೂರ್ತಿ
ಕಬ್ಬನ್ ಪೇಟೆ ಬೆಂಗಳೂರು-2

( ಮುಂದುವರಿಯುತ್ತದೆ )

## ಕ್ಷೇತ್ರ ವಾರ್ತೆ

ಶ್ರೀ ಕ್ಷೇತ್ರದಲ್ಲಿ ದಿನಾಂಕ 29-5-77 ರ ಭಾನುವಾರದಂದು ಶ್ರೀ ಬಸವಜಯಂತ್ಯುತ್ಸವ ಮತ್ತು ಬಸವತತ್ವ ವಿಚಾರ ಗೋಷ್ಠಿಯು ಹಳೆಯ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ನಡೆದು, ವರ್ಷಂ ಪ್ರತಿ ಆಚರಿಸುವ ಪೂಜ್ಯಪಾದರ ಸದಾಶಯದ ಸತ್ಸಂಪ್ರದಾಯಕ್ಕೆ ನಾಂದಿಮಾಡಿಕೊಟ್ಟಿತು. ಅಂದು ಪ್ರಾತಃಕಾಲ ಕನಕಪುರ ದೇಗುಲ ಮಠದ ಪೂಜ್ಯ ಶ್ರೀ ಮ. ನಿ. ಪ್ರ ಸ್ವ. ಮಹಾಲಿಂಗಸ್ವಾಮಿಗಳವರ ದಿವ್ಯ ಹಸ್ತದಿಂದ ಷಟ್ಸ್ಥಲ ಬ್ರಹ್ಮ ಧ್ವಜಾರೋಹಣದೊಂದಿಗೆ ಕಾರ್ಯಕ್ರಮವು ಆರಂಭಗೊಂಡಿತು. ನಂತರ ಶ್ರೀ ಬಸವೇಶ್ವರರ ಭಾವ ಚಿತ್ರದ ಮೆರವಣಿಗೆಯು ಸುಶ್ರಾವ್ಯ ಭಕ್ತಿ ಗೀತೆಗಳೊಂದಿಗೆ ನಡೆಯಿತು.

ಹತ್ತು ಘಂಟೆಗೆ ಪ್ರಾರಂಭವಾದ ಬಸವತತ್ವ ವಿಚಾರ ಗೋಷ್ಠಿಯು ಮೊದಲ ಹಂತದ ಕಾರ್ಯಕ್ರಮವು ಪರಮ ಪೂಜ್ಯ ಶ್ರೀ ಮ. ನಿ. ಪ್ರ ಸ್ವ. ಶ್ರೀ ಶ್ರೀ ಸ್ವಾಮೀಜಿಯವರ ದಿವ್ಯ ಸಮ್ಮುಖದಲ್ಲಿ ಜರುಗಿತು. ಗೋಷ್ಠಿಯ ಉದ್ಘಾಟನೆಯನ್ನು ಪರಮ ಪೂಜ್ಯ ಶ್ರೀ ಮ. ನಿ ಪ್ರ. ಸ್ವ. ಶ್ರೀ ಶ್ರೀ ಗೌರೀಶಂಕರಸ್ವಾಮಿಗಳು ನಡೆಸಿಕೊಟ್ಟರು. ಶ್ರೀ ಹೆಚ್. ದೇವೀರಪ್ಪನವರು, ಶ್ರೀ ಕೆ. ಎಂ. ರೇವಣಸಿದ್ದಯ್ಯನವರು ಮತ್ತು ಪ್ರೊ|| ಜಿ. ಎಸ್. ಶಿವರುದ್ರಪ್ಪನವರು ಉಪನ್ಯಾಸಮಾಡಿದರು. ಅಧ್ಯಕ್ಷತೆ ವಹಿಸಿದ್ದ ಬೆಂಗಳೂರು ಬೇಲೀಮಠದ ಶ್ರಿ ಮ. ನಿ. ಪ್ರ. ಸ್ವ ಶ್ರೀ ಶ್ರೀ ಶಿವರುದ್ರಸ್ವಾಮಿಗಳವರು ಅಧ್ಯಕ್ಷ ಭಾಷಣಮಾಡಿದರು. ಹಿರಿಯ ಪೂಜ್ಯಪಾದರ ಆಶೀರ್ವಚನದ ನಂತರ ಗೋಷ್ಠಿಯ ಮೊದಲ ಹಂತವು ಮಂಗಳದೊಂದಿಗೆ ಮುಗಿಯಿತು.

ಪ್ರಸಾದದ ನಂತರ ಮಧ್ಯಾಹ್ನ ಮೂರು ಘಂಟೆಗೆ ಕೊನೆಯ ಹಂತದ ಗೋಷ್ಠಿಯು ಹಿರಿಯ ಗುರುಗಳ ನೇತೃತ್ವದಲ್ಲಿ ಸಮಾವೇಶಗೊಂಡಿತು. ಶ್ರೀ ಕೆ. ಪಿ ಶಿವಲಿಂಗಯ್ಯನವರು ಮತ್ತು ಡಾ|| ಸಿದ್ದಯ್ಯಪುರಾಣಿಕ್ ರವರು ಉಪನ್ಯಾಸ ಮಾಡಿದರು. ಧ್ಯಕ್ಷತೆ ವಹಿಸಿದ್ದ ಕಿರಿಯ ಗುರುಗಳು ಸಮಾರೋಪ ಭಾಷಣ ಮಾಡಿದರು. ಪೂಜ್ಯಪಾದರ ಆಶೀರ್ವಚನದ ನಂತರ ಮಂಗಳದೊಂದಿಗೆ ಗೋಷ್ಠಿಯು ಮುಕ್ತಾಯವಾಯಿತು. ಈ ಗೋಷ್ಠಿಯಲ್ಲಿ ಅನೇಕ ಮಠಾಧಿಪತಿಗಳೂ ಮತ್ತು ಭಕ್ತಮಹಾಶಯರೂ ಭಾಗವಹಿಸಿ ಶ್ರೀಗಳವರ ಕೃಪೆಗೆ ಪಾತ್ರರಾಗಿದ್ದರು. ಸಂಜೆ ಪ್ರಸಾದದ ನಂತರ ಶ್ರೀ ಕ್ಷೇತ್ರದ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ಶ್ರೀ ಬಸವೇಶ್ವರ ವಿಜಯ ಎಂಬ ನಾಟಕವನ್ನು ಅಭಿನಯಿಸಿದರು.



# ಶ್ರೀವಾಣಿ

ಮಾನವನ ಬದುಕು ಹೆಚ್ಚಾಗಿ ಅವನ ಆಲೋಚನೆಗಳು, ಭಾವನೆಗಳು ಹಾಗೂ ದೃಷ್ಟಿಯನ್ನೇ ಅವಲಂಬಿಸಿದೆ. ಇದಕ್ಕೆ ಮಹಾಭಾರತದ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಒಮ್ಮೆ ಭಗವಂತ ದುರ್ಯೋಧನ, ಧರ್ಮರಾಯ ಇವರಿಬ್ಬರನ್ನೂ ಕರೆದು, ಧರ್ಮರಾಯನನ್ನುಕುರಿತು " ಅಯ್ಯಾ ಧರ್ಮರಾಯ ಈ ಜಗತ್ತಿನಲ್ಲಿ ಯಾರು ಯಾರು ಕೆಟ್ಟವರು ನೋಡಿ ಬಂದು ಹೇಳು " ಎಂದನು. ನಂತರ ದುರ್ಯೋಧನನನ್ನು ಕುರಿತು " ಅಯ್ಯಾ ದುರ್ಯೋಧನ, ಈ ಜಗತ್ತಿನಲ್ಲಿ ಒಳ್ಳೆಯವರು ಎಷ್ಟುಮಂದಿಇದ್ದಾರೆ ನೋಡಿ ಬಂದು ತಿಳಿಸು " ಎಂದು ಹೇಳಿ ಕಳುಹಿಸಿದನು. ಇಬ್ಬರೂ ಪ್ರಪಂಚದ ಮೂಲೆ ಮೂಲೆ ಸುತ್ತಿ ಬಂದು ಧರ್ಮರಾಯನು " ಕೃಷ್ಣಪರಮಾತ್ಮಾ, ಜಗತ್ತಿನ ಎಲ್ಲಾಜನರನ್ನೂ ಕಂಡೆ; ಒಬ್ಬರೂ ಕೆಟ್ಟವರು ನನ್ನ ಕಣ್ಣಿಗೆ ಬೀಳಲೇ ಇಲ್ಲ " ಎಂದನು. ದುರ್ಯೋಧನನು " ಭಗವಂತಾ ಎಲ್ಲಾ ಸುತ್ತಿ ಬಂದೆ; ಜಗತ್ತಿನಲ್ಲಿ ಒಳ್ಳೆಯವನು ಎನ್ನುವ ಒಂದು ನರಪಿಳ್ಳೆಯನ್ನೂ ಕಾಣಲಿಲ್ಲ " ಎಂದೊಪ್ಪಿಸಿದನು. ಭಗವಂತ ಇಬ್ಬರ ಮಾತನ್ನೂ ಕೇಳಿ ನಕ್ಕನು. ಈ ಪ್ರಸಂಗದಿಂದಲೇ ನಮಗೆ ಗೊತ್ತಾಗುತ್ತದೆ. ದೃಷ್ಟಿ ಒಳ್ಳೆಯದಾದರೆ ಜಗತ್ತೇ ಒಳ್ಳೆಯದು; ಅದು ಕೆಟ್ಟದ್ದಾದರೆ ಜಗತ್ತೂ ಕೆಟ್ಟದ್ದು ಎಂದು. ಆದ್ದರಿಂದ ದೃಷ್ಟಿಯಂತೆ ಸೃಷ್ಟಿ, ಭಾವನೆಯಂತೆ ಭವಿಷ್ಯತ್ತು, ಮನಸ್ಸಿನಂತೆ ಮಹಾದೇವ ಎಂಬುದು ಸ್ಪಷ್ಟವಾಗುತ್ತದೆ. ಮನಸ್ಸೇ ಮನುಷ್ಯನ ಸುಖ–ದುಃಖ, ಸ್ವರ್ಗ–ನರಕ, ಪುಣ್ಯ-ಪಾಪ, ಪ್ರೀತಿ–ದ್ವೇಷ ಇವುಗಳಿಗೆ ಕಾರಣವಾದುದು. ಶಿವಶರಣೆ ಅಕ್ಕಮಹಾದೇವಿಯ ಈ ವಚನ ಈ ಅಂಶವನ್ನೇ ಬಿಂಬಿಸುತ್ತದೆ —

> ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
> ಕರಣಂಗಳ ಚೇಷ್ಟೆಗೆ ಮನವೇ ಬೀಜ
> ಎನಗುಳ್ಳದೊಂದು ಮನ, ಆ ಮನ ನಿಮ್ಮಲ್ಲಿ ಸಿಲ್ಕಿದ ಬಳಿಕ
> ಎನಗೆ ಭವವುಂಟೇ ಚನ್ನಮಲ್ಲಿಕಾರ್ಜುನಾ ||

# 'ಸಿದ್ಧಗಂಗಾ'

ಜೂನ್, ೧೯೭೭

ಸಂಪುಟ–೧೩ ಸಂಚಿಕೆ–೬

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

**ವಾರ್ಷಿಕ ಚಂದಾ:** 10 ರೂ
**ಆಜೀವ ಸದಸ್ಯತ್ವ:** 101 ರೂ


## ಈ ಸಂಚಿಕೆಯಲ್ಲಿ


- ಶ್ರೀವಾಣಿ 3
- ನವನೀತ, ಅಮೃತಬಿಂದು 5
- ಕನ್ನಡ ಸಾಹಿತ್ಯ ಪರಿಷತ್ತು
  —ನಡೆದು ಬಂದ ದಾರಿ 6
- ಮಧುರ ಚೆನ್ನ 9
- ಹರಿಹರದೇವನ ಶಂಕರದಾಸಿಮಯ್ಯನ ರಗಳೆ 12
- ಕಾವ್ಯವಾಹಿನಿ
- ಕಾಲನ ಸೋಲು ( ಗೀತ ರೂಪಕ )
- ಅಪೂರ್ವ ಜನಪದ ಕಲಾಮೇಳ 17


ಮುಖ ಪುಟ

ಕನ್ನಡ ಸಾಹಿತ್ಯ ಪರಿಷತ್ತಿನ ಸೇವೆಯ ಸಂಕೇತ.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗ್ಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
'ಸಿದ್ಧಗಂಗಾ' [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ –572131 ತುಮಕೂರು ಜಿಲ್ಲೆ

ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ನಿಮ್ಮ ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ವಿಳಾಸದ ಹಿಂಬದಿ ಇರುವ ಕ್ರಮಾಂಕ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪತ್ರ ಬರೆಯಿರಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ನೂತನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ವಿನಂತಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಪ್ರಕಾಶಕರು

**'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾಮಠ–572131, ತುಮಕೂರು ಜಿಲ್ಲೆ**

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ಸುಜನೋ ನ ಯಾತಿ ವೈರಂ ಪರಹಿತನಿರತೋ ವಿನಾಶಕಾಲೇಽಪಿ ।**
**ಛೇದೇಽಪಿ ಚಂದನತರುಃ ಸುರಭಯತಿ ಮುಖಂ ಕುಠಾರಸ್ಯ ॥**

ಪರಹಿತವೆ ಎಂದೆಂದು ಸತ್ಪುರುಷನಿಂದ
ಮರಣವೇ ಬಂದರೂ ಹಗೆತನವ ಹೊಂದ.
ಕಡಿದು ಪುಡಿ ಮಾಡಿದರು ಕೊಡಲಿಯಿಂದ
ಕೊಡುವುದಾ ಕೊಡಲಿಗೇ ಕಂಪ ಶ್ರೀಗಂಧ.

  

**ಕೀಟೋಽಪಿ ಸುಮನಃ ಸಂಗಾದಾರೋಹತಿ ಸತಾಂ ಶಿರಃ ।**
**ಅಶ್ಮಾಪಿ ಯಾತಿ ದೇವತ್ವಂ ಮಹದ್ಭಿಃ ಸುಪ್ರತಿಷ್ಠಿತಃ ॥**

ಹೂವಿನೊಡನಾಟದಲಿ ಕೀಟವೂ ಜಿಗಿದು
ಪುಣ್ಯಪುರುಷರ ಶಿರವನೇರುವುದು ನಲಿದು
ನಿಲ್ಲಿಸಲು ಕಲ್ಲೊಂದನೊಳ್ಳೆಯವ ಕಡೆದು
ಎಲ್ಲರಿಂ ಪೂಜ್ಯವದು ದೈವತ್ವವಡೆದು.

  

**ಕಾಚಃ ಕಾಂಚನ ಸಂಸಗಾದ್ಧತ್ತೇ ಮಾರಕತೀಂ ದ್ಯುತಿಮ್ ।**
**ತಥಾ ಸತ್ಸನ್ನಿಧಾನೇನ ಮೂರ್ಖೋ ಯಾತಿ ಪ್ರವೀಣತಾಮ್॥**

ಚಿನ್ನದೊಡಗೂಡಿರಲು ಗಾಜು ಕೂಡ
ಹೊನ್ನಮಣಿಯಂತೆಯೇ ಹೊಳೆಯುವುದು ನೋಡಾ
ಪಂಡಿತನ ಸಂಗದಲಿ ಪಾಮರನು ಕೂಡ
ಪಾಂಡಿತ್ಯವನು ಪಡೆವನಿದು ಸತ್ಯ ನೋಡಾ.

—'ಕಾವ್ಯಸುಧಾಪ್ರಿಯ'

# ಅಮೃತ ಬಿಂದು

ಇರುವ ಸ್ಥಿತಿಗಿಂತಲೂ ಉತ್ತಮವಾದುದು ಮತ್ತೊಂದು ಇದೆ ಎನ್ನುವ ಅನಿಸಿಕೆ ಯಾರನ್ನೂ ಬಿಟ್ಟದ್ದಲ್ಲ. ಇದ್ದದ್ದರಲ್ಲಿಯೇ ತೃಪ್ತಿ ಹೊಂದುವ ಮಂದಿ ಇಲ್ಲವೆಂಬುದು ಇದರರ್ಥವಲ್ಲ. ಅಂತಹವರು ಇದ್ದರೂ ಬೆರಳೆಣಿಕೆಯ ಸಂಖ್ಯೆಯಲ್ಲಿ ಮಾತ್ರವೆಂಬುದೂ ಸುಳ್ಳಲ್ಲ. ಇರುವ ಸ್ಥಿತಿಯಲ್ಲಿಯೇ ಸಂತೋಷವನ್ನು ಕಾಣುವ ಆ ಕೆಲವೇ ಮಂದಿ ನಿಜವಾಗಿಯೂ ಸುಖಜೀವಿಗಳು. ಇಲ್ಲದ್ದಕ್ಕಾಗಿ ಪರಿತಾಪ ಪಡುತ್ತಾ ಇರುವುದನ್ನನುಭವಿಸಿ ಅದರ ಸುಖವನ್ನು ಸವಿಯುವ ಭಾಗ್ಯವೂ ಇಲ್ಲದ ಅಸಂತೃಪ್ತರ ಜೀವನ ಸದಾ ದುಃಖಮಯ. ಹಲವೊಮ್ಮೆ ಗತವೈಭವವನ್ನು ನೆನೆದು ಸ್ಥಿತಸೌಖ್ಯದಮೃತವನ್ನು ಆಸ್ವಾದಿಸುವಲ್ಲಿ ವಂಚಿತರಾಗುವ ದುರದೃಷ್ಟಶಾಲಿಗಳು ಪರಿತಪಿಸುವುದನ್ನು ಕಾಣಬಹುದು. ಪಡುವಣದ ಕಡಲಿನಲ್ಲಿ ಆಡಗಿದ ರವಿಯನ್ನು ನೆನೆದು ಕಣ್ಣೀರಿಡುತ್ತಾ ಕುಳಿತ ದೌರ್ಭಾಗ್ಯಶಾಲಿಯು ನೇತ್ರಾನಂದಕರನಾದ ಉಡುಪತಿಯ ದರ್ಶನದಿಂದ ವಂಚಿತನಾಗುತ್ತಾನೆ. ಭೂತಕೈಯಿಂದ ಜಾರಿಹೋಗಿದೆ; ಭವಿಷ್ಯತ್ತು ಇನ್ನೂ ಕೈಸೇರಿಲ್ಲ. ಇವೆರಡರ ಚಿಂತೆ ಸರಿಯಲ್ಲ. ವರ್ತಮಾನ ಕೈಯಲ್ಲಿದೆ; ಅದರ ಚಿಂತೆನೆ ನಮ್ಮ ಕರ್ತವ್ಯ. ಅದನ್ನು ಆನಂದದಾಯಕವಾಗಿ ಮಾರ್ಪಡಿಸಿಕೊಳ್ಳಬಹುದಾದ ಅವಕಾಶ ಇನ್ನೂ ನಮಗಿದ್ದೇ ಇದೆ. ಇರುವುದಕ್ಕಿಂತ ಇಲ್ಲದ್ದು ಉತ್ತಮ ಎಂಬ ಭ್ರಮೆ ಒಂದು ಮರೀಚಿಕೆ. ಇದನ್ನರಸುವುದು ಮತ್ತಷ್ಟು ಅತೃಪ್ತಿಗೆ ಆಹ್ವಾನವಿತ್ತಂತೆಯೇ ಸರಿ

—'ದುಂಬಿ'

# ಕನ್ನಡ ಸಾಹಿತ್ಯ ಪರಿಷತ್ತು—ನಡೆದು ಬಂದ ದಾರಿ

## ◊: ಒಂದು ಪಕ್ಷಿ ನೋಟ :◊

ಕರ್ನಾಟಕ ಪ್ರಾಂತ್ಯ ಭಿನ್ನ ಭಿನ್ನ ಆಡಳಿತದವರ ಹಿಡಿತಕ್ಕೆ ಸಿಕ್ಕಿ ಅನ್ಯ ಭಾಷಾ ಪ್ರಾಬಲ್ಯ ಹೆಚ್ಚಾಗಿ ಹರಿದು ಹಂಚಿ ಹೋಗಿದ್ದ ಸಂದಿಗ್ಧ ಕಾಲವೊಂದಿತ್ತು. ಇಂಥಹ ವಿಷಮ ಪರಿಸ್ಥಿತಿಯಲ್ಲಿ ನಾಡಿನ ವಿವಿಧ ಭಾಗಗಳಲ್ಲಿ ವಾಸಿಸುತ್ತಿದ್ದ ಕನ್ನಡ ಭಾಷಾಭಿಮಾನಿಗಳು ಕನ್ನಡ ಭಾಷೆ ಸಂಸ್ಕೃತಗಳ ಸಂರಕ್ಷಣೆಯ ಅವಶ್ಯಕತೆಯನ್ನು ಮನಗಂಡರು. ಈ ಉದ್ದೇಶ ಕೈಗೂಡಬೇಕಾದರೆ ಕನ್ನಡಿಗರಲ್ಲಿ ಭಾವೈಕ್ಯತೆ ಬೆಳೆಯ ಬೇಕೆಂಬುದನ್ನು ಅರಿತರು. ಇವರ ಮಾನಸಿಕ ಕಳಕಳಿಗೆ ಮೈಸೂರು ಅರಸರಿಗೆ ಸಹಕಾರ, ಪ್ರೋತ್ಸಾಹವೂ ದೊರೆಯಿತು. ಇದರ ಪರಿಣಾಮವಾಗಿ 1915 ರಲ್ಲಿ ಕರ್ನಾಟಕ ಪರಿಷತ್ತು ಉಗಮವಾಯಿತು.

ಕರ್ನಾಟಕ ಸಾಹಿತ್ಯ ಪರಿಷತ್ತಿನ ಪ್ರಥಮ ಅಧ್ಯಕ್ಷರಾಗಿ ರಾಜಮಂತ್ರಿ ಪ್ರವೀಣ ಶ್ರೀ ಎಚ್. ಎ. ನಂಜುಂಡಯ್ಯ ಅವರು ವಹಿಸಿಕೊಂಡರು. ಉಪಾಧ್ಯಕ್ಷರಾಗಿ ರಾವಬಹದ್ದೂರ್ ಎಂ. ಶಾಮರಾಯರು ಕೋಶಾಧ್ಯಕ್ಷರಾಗಿ ಡಾ|| ಪಿ. ಎಸ್. ಅಚ್ಚುತರಾಯರು ಕಾರ್ಯದರ್ಶಿಗಳಾಗಿ ಶ್ರೀ ಬಿ. ಕೃಷ್ಣಪ್ಪನವರು ಅಧಿಕಾರವನ್ನು ವಹಿಸಿಕೊಂಡು ಪರಿಷತ್ತಿನ ತೇರನ್ನು ಎಳೆವುದರಲ್ಲಿ ಮೊದಲಿಗರಾದರು. ಪರಿಷತ್ತಿನ ಪುರೋಭಿವೃದ್ಧಿಗಾಗಿ ಮೈಸೂರು ರಾಜ ಮನೆತನ ವಿಶೇಷ ಆಸಕ್ತಿ ವಹಿಸಿ ಆರ್ಥಿಕ ನೆರವನ್ನು ನೀಡಿತು. ಶ್ರೀ ಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರು ಪರಿಷತ್ತಿನ ಮಹಾಪೋಷಕರಾಗಿದ್ದರು. ಶ್ರೀ ಕಂಠೀರವ ನರಸಿಂಹರಾಜ ಒಡೆಯರ ಅವರ ಮಕ್ಕಳಾದ ಶ್ರೀ ಜಯಚಾಮರಾಜ ಒಡೆಯರವರೂ ಪರಿಷತ್ತಿನ ಅಧ್ಯಕ್ಷರಾಗಿದ್ದುದು ಅವರಿಗೆ ಕನ್ನಡ ಸಾಹಿತ್ಯದ ಮೇಲಿದ್ದ ಆಸಕ್ತಿ ಒಲವಿನ ಪ್ರತೀಕ.



ಶ್ರೀ ಜಿ. ನಾರಾಯಣ ಅವರು
(ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು)

ಶ್ರೀ ಎಚ್. ವಿ. ನಂಜುಂಡಯ್ಯನವರು ಅಧ್ಯಕ್ಷರಾಗಿದ್ದ ಕಾಲದಲ್ಲಿ ಮೂರು ಕನ್ನಡ ಸಾಹಿತ್ಯ ಸಮ್ಮೇಳನಗಳು ನಡೆದು ಕನ್ನಡಿಗರಿಗೆ ಸಾಹಿತಿಗಳಿಗೆ ಹೊಸಚೈತನ್ಯವನ್ನು ತಂದುಕೊಟ್ಟಿತು. ಪರಿಷತ್ತು ಸ್ಥಾಪನೆಯಾಗಿ ಹದಿಮೂರು ವರ್ಷಗಳು ಕಳೆದರೂ ಅದಕ್ಕೆ ತನ್ನದೇ ಆದ ಕಟ್ಟಡವಿರಲಿಲ್ಲ. ದಿನೇ ದಿನೇ ವ್ಯಾಪಕವಾಗಿ ಬೆಳೆಯುತ್ತಿರುವ ಪರಿಷತ್ತಿಗೆ ಸ್ವಂತ ಕಟ್ಟಡದ ಅವಶ್ಯ

ಕತೆಯನ್ನು ಮನಗಂಡ ಶ್ರೀ ಕರ್ಪೂರ ಶ್ರೀನಿವಾಸರಾಯರು ವಿಶೇಷ ಆಸಕ್ತಿವಹಿಸಿ ಕಟ್ಟಡಕ್ಕೆ ಅಗತ್ಯವಾದ ನಿವೇಶನ ಹಾಗು ಹಣವನ್ನು ಸಂಗ್ರಹಿಸಿದರು. ಸಾಹಿತ್ಯಾಭಿಮಾನಿಗಳ ಉದಾರ ನೆರವಿನಿಂದ 1933 ರಲ್ಲಿ "ಶ್ರೀ ಕೃಷ್ಣರಾಜ ಪರಿಷ್ಮಂದಿರ" ನಿರ್ಮಾಣವಾಯಿತು

ಪರಿಷತ್ತಿನ ಕಾರ್ಯಾಲಯ ಹೊಸಕಟ್ಟಡಕ್ಕೆ ಬಂದಮೇಲೆ ಅದರ ಕಾರ್ಯ ಬಹುಮುಖವಾಗಿ ಬೆಳೆಯ ತೊಡಗಿತು. ಈ ಹತ್ತೊಂಬತ್ತು ವರ್ಷಗಳ ಅವಧಿಯಲ್ಲಿ ಪರಿಷತ್ತು ಅನೇಕ ಉಪಯುಕ್ತ ಪ್ರಕಟಣೆಗಳನ್ನು ಪ್ರಕಟಿಸಿ ಸುಲಭ ಬೆಲೆಯಲ್ಲಿ ಕೃತಿಗಳು ಕನ್ನಡಿಗರ ಕೈ ಸೇರುವಂತೆ ಮಾಡಿತು. ಇದಕ್ಕಾಗಿ ಅನೇಕ ಮಹನೀಯರು ಶ್ರಮಿಸಿದ್ದಾರೆ. ಈ ಪ್ರಕಟಣೆಗಳು ಹೊರಬರಲು ಶ್ರಮಿಸಿದವರಲ್ಲಿ ಶ್ರೀ ಬೆಳ್ಳಾವೆ ನಾರಾಯಣಪ್ಪನವರು ಪ್ರಮುಖರು 1934 ರಲ್ಲಿ ಶ್ರೀ ಡಿ. ವಿ. ಗುಂಡಪ್ಪನವರು, ಉಪಾಧ್ಯಕ್ಷರಾಗಿ ಅಧಿಕಾರವನ್ನು ವಹಿಸಿಕೊಂಡರು. ಇವರು ಬಂದಮೇಲೆ ಸಾಹಿತ್ಯ ಚಟುವಟಿಕೆ ಸ್ವಲ್ಪ ವ್ಯಾಪಕವಾಗಿ ಬೆಳೆಯಿತು. ಗಮಕ ಶಿಕ್ಷಣ, ಸಾಹಿತ್ಯೋತ್ಸವ' ಪಂಚಾದೋಪನ್ಯಾಸ ಯೋಜನೆ ಈ ಕಾರ್ಯಕ್ರಮಗಳನ್ನು ಪ್ರಾರಂಭಿಸಿದರು.

ಪರಿಷತ್ತಿನ ಉಪಾಧ್ಯಕ್ಷರಾಗಿದ್ದು ತಮ್ಮಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ ಮತ್ತೊಬ್ಬ ಮಹನೀಯರೆಂದರೆ ಶ್ರೀ ಬಿ. ಎಂ. ಶ್ರೀಕಂಠಯ್ಯನವರು. ಇವರು 1938 ರಲ್ಲಿ ಅಧಿಕಾರವನ್ನು ವಹಿಸಿಕೊಂಡು ಸಂಸತ್ತಿನ ಕಾರ್ಯ ಮತ್ತಷ್ಟು ವ್ಯಾಪಕವಾಗಿ ಬೆಳೆಯಲು ಶ್ರಮಿಸಿದರು. ಕನ್ನಡ ನಾಡಿನ ಭೂಪಟ ನಕ್ಷೆಯುಳ್ಳ ಪರಿಷತ್ತಿನ ಲಾಂಛನವನ್ನು ರೂಪಿಸಿದರು.. ಪರಿಷತ್ತಿಗೆ ತನ್ನದೇ ಆದ ಮುದ್ರಣಾಲಯವೊಂದಿದ್ದರೆ ಅದರ ಚಟುವಟಿಕೆಗಳನ್ನು ವಿಸ್ತರಿಸಲು ಬಹುಮಟ್ಟಿಗೆ ಸಹಾಯವಾಗುವುದೆಂಬುದನ್ನು ಗಮನಿಸಿದ ಬಿ. ಎಂ. ಶ್ರೀ. ಅವರು ಅಚ್ಚುಕೂಟದ ಸ್ಥಾಪನೆಗಾಗಿ 1939 ರಲ್ಲಿ 5000 ರೂಗಳನ್ನು ಉದಾರವಾಗಿ ನೀಡಿದರು. ಇವರ ಉದಾರ ಪರಿಣಾಮವಾಗಿ ಬಿ. ಎಂ. ಶ್ರೀ. ಎಂಬ ಹೆಸರಿನಿಂದಲೇ ಜನ್ಮತಾಳಿತು. ಇಂದುಮುದ್ರಣಾಲಯ ವ್ಯಾಪಕವಾಗಿ ಬೆಳೆದಿದ್ದು ಬಹುತೇಕವಾಗಿ ಪರಿಷತ್ತಿನ ಎಲ್ಲಾ ಪ್ರಕಟಣೆಗಳನ್ನು ಮುದ್ರಿಸುತ್ತಿದೆ. 1938 ರಲ್ಲಿ ಮಾಸ್ತಿ ವೆಂಕಟೇಶಯ್ಯಂಗಾರ್ ಅವರು ಉಪಾಧ್ಯಕ್ಷರಾಗಿ ಅಧಿಕಾರ ಸೂತ್ರವನ್ನು ವಹಿಸಿಕೊಂಡರು.

ಈ ಮಧ್ಯೆ ಕರ್ನಾಟಕ ಸಾಹಿತ್ಯಪರಿಷತ್ ಎಂಬ ಹೆಸರನ್ನು ಕನ್ನಡ ಸಾಹಿತ್ಯ ಪರಿಷತ್ತು ಎಂದು ಬದಲಾಯಿಸಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟರು. ಇದರ ಬಗ್ಗೆ ಸಾಕಷ್ಟು ವಾಗ್ವಾದವೂ ನಡೆಯಿತು. ಕೊನೆಗೆ 1938 ರಲ್ಲಿ ಬಳ್ಳಾರಿಯಲ್ಲಿ ನಡೆದ ಸಕಲ ಸದಸ್ಯರ ಸಭೆಯಲ್ಲಿ ಈ ಬಗ್ಗೆ ಚರ್ಚೆ ಮಾಡಿ 'ಕನ್ನಡ ಸಾಹಿತ್ಯ ಪರಿಷತ್ತು, ಎಂದು ನಾಮಕರಣ ಮಾಡಿದರು. ಪರಿಷತ್ತು ಪ್ರಕಟಿಸುತ್ತಿದ್ದ 'ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ, ಕೇವಲ ಪಾಂಡಿತ್ಯಪೂರ್ಣವಾದ ಲೇಖನಗಳಿಗೇ ಸೀಮಿತವಾದುದರಿಂದ, ಪರಿಷತ್ತಿನ ಕಾರ್ಯ ಚಟುವಟಿಕೆಗಳನ್ನು ಪ್ರಚಾರಮಾಡಲು ಅವಕಾಶವಿಲ್ಲದಿರುವುದನ್ನು ಗಮನಿಸಿ 1938 ರಲ್ಲಿ 'ಕನ್ನಡ ನುಡಿ, ಎಂಬ ಪಕ್ಷಪತ್ರಿಕೆಯನ್ನು ಪ್ರಾರಂಭಿಸಿದರು. ಅ. ನ. ಕೃ. ಅವರು ಅದರ ಪ್ರಥಮ ಸಂಪಾದಕರಾಗಿ ಕೆಲಸ ಮಾಡಿದರು. ಅಂದು ಪ್ರಾರಂಭವಾದ ಕನ್ನಡ ನುಡಿ ಈಗ ಪ್ರಾಕ್ಷಂಕ ಪತ್ರಿಕೆಯಾಗಿ ಜನಪ್ರಿಯತೆಯನ್ನು ಗಳಿಸಿದೆ. ಪ್ರಸ್ತುತದಲ್ಲಿ ಹಿ. ಮ. ನಾಗಯ್ಯನವರು ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಜನಸಾಮಾನ್ಯರಲ್ಲಿ ಕನ್ನಡ ಭಾಷಾಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿಸಲು ಶ್ರೀ ಬಿ. ಎಂ. ಶ್ರೀ ರವರು ಕಾರ್ಯರೂಪಕ್ಕೆ ತಂದ ಮುಖ್ಯ ವ್ಯವಸ್ಥೆಯೆಂದರೆ ಕನ್ನಡ ಸಾಹಿತ್ಯ ಪರೀಕ್ಷೆಗಳು. ಈ ಪರೀಕ್ಷೆಗಳು 1940 ರಲ್ಲಿ ಪ್ರಾರಂಭವಾಯಿತು. ಪ್ರಾರಂಭದಲ್ಲಿ ಲೇಖನ, ಕಾವ್ಯ, ಜಾಣ ಎಂಬ ಮೂರು ಪರೀಕ್ಷೆಗಳನ್ನು ನಡೆಸಲು ವ್ಯವಸ್ಥೆ ಮಾಡಲಾಯತು. ಬಿ. ಎಂ. ಶ್ರೀ ಅವರ ಅಧಿಕಾರವಧಿಯಲ್ಲಿ 1940 ರಲ್ಲಿ ಪರಿಷತ್ತಿನ ಬೆಳ್ಳಿಹಬ್ಬ ನಡೆಯಿತು. 1944 ರಲ್ಲಿ ಪರಿಷತ್ತಿನ ಕಟ್ಟಡದಲ್ಲಿ ಕನ್ನಡ-ಕನ್ನಡ ನಿಘಂಟುವಿನ ಕಾರ್ಯಾಲಯ ಪ್ರಾರಂಭವಾಯಿತು

ಪರಿಷತ್ತಿನ ಅಧ್ಯಕ್ಷರಾಗಿ ಶ್ರೀ ತಿ ರು ಮ ಲೆ ತಾತಾಚಾರ್ಯ ಶರ್ಮ ರೆವರೆಂಡ ಉತ್ತಂಗಿ ಚನ್ನಪ್ಪ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿ ಶ್ರೀ ಮಾಸ್ತಿ

ವೆಂಕಟೇಶಯ್ಯಂಗಾರ್ ಶ್ರೀ ಎ. ಎನ್. ಮೂರ್ತಿರಾವ್ ಆಸ್ಥಾನ ವಿದ್ವಾನ್ ಪಂಡಿತ ರತ್ನ ಶ್ರೀ ಬಿ. ಶಿವಮೂರ್ತಿಶಾಸ್ತ್ರಿ ಶ್ರೀ ಜಿ. ವೆಂಕಟಸುಬ್ಬಯ್ಯ ಅವರು ತಮ್ಮ ಅಧಿಕಾರವಧಿಯಲ್ಲಿ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿ ಪರಿಷತ್ತಿನ ಘನತೆ ಕೀರ್ತಿ ಹೆಚ್ಚುವಂತೆ ಮಾಡಿದರು

ಶ್ರೀ ಜಿ. ನಾರಾಯಣ ಅವರು 1969 ರಲ್ಲಿ ಅಧ್ಯಕ್ಷಸ್ಥಾನವನ್ನು ವಹಿಸಿಕೊಂಡಮೇಲೆ ಕನ್ನಡ ಸಾಹಿತ್ಯಪರಿಷತ್ತು ಪ್ರಬಲವಾಗಿ ವ್ಯಾಪಕವಾಗಿ ಬೆಳೆಯತೊಡಗಿದೆ. ಅವರು ಅಧಿಕಾರ ವಹಿಸಿಕೊಂಡ ಪ್ರಾರಂಭದಲ್ಲಿಯೇ ಪರಿಷತ್ತಿನ ಕಾರ್ಯವು ಪುನರ್‌ವ್ಯವಸ್ಥೆಯಾಯಿತು. ಪ್ರಥಮ ಹಂತವಾಗಿ ತ್ರೈಮಾಸಿಕ ಯೋಜನೆಯನ್ನು ರೂಪಿಸಿದವರಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಚ್ಚಿಕೊಂಡು ಅವುಗಳನ್ನು ಕಾರ್ಯರೂಪಕ್ಕೆ ತಂದಿದ್ದಾರೆ, ತರುತ್ತಿದ್ದಾರೆ. ಪರಿಷತ್ತು ಕೇವಲ ನಗರಕ್ಕೆ ಸೀಮಿತವಾಗದೆ ನಾಡಿನ ಮೂಲೆ ಮೂಲೆಗೊ ಹಬ್ಬಬೇಕೆಂಬ ಉದ್ದೇಶದಿಂದ ಜಿಲ್ಲಾ ಸಮಿತಿಗಳನ್ನು ರೂಪಿಸಿ ತನ್ಮೂಲಕ ಪರಿಷತ್ತಿನ ಕಾರ್ಯ ಚಟುವಟಿಕೆಗಳನ್ನು ವಿಸ್ತಾರಗೊಳಿಸಿದರು. ಪರಿಷತ್ತಿನ ಸದಸ್ಯರ ಬಳಗವನ್ನು ಹೆಚ್ಚಿಸಿದರು. ಕನ್ನಡ–ಕನ್ನಡ ನಿಘಂಟನ್ನು ತ್ವರಿತವಾಗಿ ಹೊರಬರಲು ವ್ಯವಸ್ಥೆಮಾಡಿದರು. ಈಗಾಗಲೆ ಮೂರು ಸಂಪುಟಗಳು ಪ್ರಕಟವಾಗಿರುವುದು ಶ್ರೀ ಶ್ರೀ ನಾರಾಯಣರ ಕಾರ್ಯದಕ್ಷತೆಯ ದ್ಯೋತಕ. ಮಾಸಿಕವಾಗಿ ಪ್ರಕಟವಾಗುತ್ತಿದ್ದ ಕನ್ನಡ ನುಡಿಯನ್ನು ಪ್ರಾಕ್ಷಿಕ ಪತ್ರಿಕೆಯನ್ನಾಗಿ ಮಾಡಿರುದಲ್ಲದೆ ಗಮಕ ಶಿಕ್ಷಣ, ಲೇಖಕ ಲೇಖಕಿಯರ ಶಿಬಿರಗಳನ್ನು ಏರ್ಪಡಿಸಿ ಕಿರಿಯರಿಗೆ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡುವಂತೆ ಮಾಡಿದರು. ಅಲ್ಲದೆ ಉದಯೋನ್ಮುಖ ಲೇಖಕರಿಂದ ಲೇಖನಗಳನ್ನು ಕವನಗಳನ್ನು ಬರೆಸಿ ಪ್ರಕಟಸಿದ್ದಾರೆ. ಇವರು ಅಧ್ಯಕ್ಷರಾಗಿ ಬಂದಾಗ ಪುರವೃತಿ ಗ್ರಂಥ ಭಂಡಾರದಲ್ಲಿ 10 ಸಾವಿರ ಪುಸ್ತಕಗಳಿದ್ದವು. ಈಗ ಅದರ ಸಂಖ್ಯೆ ಮುವತ್ಮೂರು ಸಾವಿರಕ್ಕೇರಿದೆ. ಸಹಸ್ರಾರು ಜನ ಸಾಹಿತ್ಯಾಭಿಮಾನಿಗಳು, ಸಂಶೋಧಕರು ಇದರ ಪ್ರಯೋಜನವನ್ನು ಪಡೆಯುತ್ತಿದ್ದಾರೆ. ಸಂಶೋಧನಾ ವಿಭಾಗ ಜಾನಪದ ವಿಭಾಗ ಸ್ಥಿರಪುಸ್ತಕ ಪ್ರದರ್ಶನ ಸಾಂಸ್ಕೃತಿಕ ವಸ್ತುಪ್ರದರ್ಶನವನ್ನು ಪ್ರಾರಂಭಿಸಿದ್ದಾರೆ. ಶಾಸನ ತರಗತಿಗಳನ್ನು ನಡೆಸಲಾಗುತ್ತಿದೆ.

ಕೇವಲ ಪಂಡಿತರಿಗೆ ಸೀಮಿತವಾಗಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯವ್ಯಾಪ್ತಿ ಜಾನಪದ ಅಭಿವೃದ್ಧಿ ಯೋಜನೆಯ ಮೂಲಕ ನಾಡಿನ ಮೂಲೆ ಮೂಲೆಗಳಿಗೆ ಹಳ್ಳಿ ಹಳ್ಳಿಗಳನ್ನು ಪ್ರವೇಶಿಸುವಂತಾಯ್ತು. ಈ ಜಾನಪದ ಅಭಿವೃದ್ಧಿ ಯೋಜನೆಗೆ ಜಾನಪದವನ್ನು ಹಾಸಿ ಹೊದ್ದ ಶ್ರೀ ಹೆಚ್. ಎಲ್. ನಾಗೇಗೌಡ ಅವರು ನಿರ್ದೇಶಕರಾಗಿ ಯೋಜನೆಯ ಪ್ರಗತಿಗಾಗಿ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಪ್ರತಿಜಿಲ್ಲೆಗೆ ಇಬ್ಬಿಬ್ಬರಂತೆ ಜನಪದ ಕಲಾ ಮಾಹಿತಿ ಸಂಗ್ರಹಕಾರರನ್ನು ನೇಮಿಸಿ ತನ್ಮೂಲಕ ಜನಪದ ಕವಿಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿದೆ ಈ ಮಾಹಿತಿ ಸಂಗ್ರಹಕಾರರು ಸುಮಾರು ನಾಲ್ಕು ತಿಂಗಳ ಅವಧಿಯಲ್ಲಿ 10 ಸಾವಿರ ಕಲಾಮಂದಿರಗಳನ್ನು 1 ಲಕ್ಷಜನ ಕಲಾವಿದರನ್ನು ಭೆಟ್ಟಿ ಮಾಡಿ 145 ಕಲೆಕಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಇವರು ಸುಮಾರು 9500 ಗ್ರಾಮಗಳಿಗೆ ಭೆಟ್ಟಿ ಕೊಟ್ಟದ್ದಾರೆ. ಈಗಾಗಲೇ ಜಿಲ್ಲಾಮಟ್ಟದಲ್ಲಿ ಜನಪದ ಕಲಾಮೇಳಗಳು ಯಶಸ್ವಿಯಾಗಿ ನಡೆದಿವೆ. ಕಳೆದ ನವೆಂಬರ್ ತಿಂಗಳಲ್ಲಿ ಬೆಂಗಳೂರು ನಗರದಲ್ಲಿ ಮೂರು ದಿನಗಳಕಾಲ ಅದ್ದೂರಿಯಾಗಿ ರಾಜ್ಯಮಟ್ಟದ ಜನಪದ ಕಲಾಮೇಳ ನಡೆಯಿತು.

ಪರಿಷತ್ ಜನಪದ ಕಲೆಗಳಿಗೆ ಸಂಭಂಧಿಸಿದಂತೆ ಯಾವುದೇ ವಿಶ್ವವಿದ್ಯಾನಿಲಯ ಮಾಡದಷ್ಟು ಕಾರ್ಯವನ್ನು ಮಾಡಿದೆ. ಜನಪದ ಕಲೆಗಳ ಬಗ್ಗೆ ಸಚಿತ್ರವಾದ ಒಂದು ಬೃಹತ್ ಕೃತಿಯನ್ನು ಶ್ರೀ ಗೊ. ರು. ಚನ್ನಬಸಪ್ಪ ಅವರ ಸಂಚಾಲಕತ್ವದಲ್ಲಿ ಪ್ರಕಟಿಸಿವೆ. ಈ ಕೃತಿಯಲ್ಲಿ 145 ಕಲೆಗಳನ್ನು ಪರಿಚಯ ಮಾಡಲಾಗಿದೆ.

ಶ್ರೀ ಜಿ. ನಾರಾಯಣರು ಬಂದ ಮೇಲೆ ಹತ್ತಾರು ಬಗೆಯ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಯಶಸ್ವಿಯಾಗಿ ಕಾರ್ಯಗತಗೊಳಿಸುತ್ತ ಬಂದಿದ್ದಾರೆ. ವಿವಿಧ ವಿಷಯಗಳನ್ನು ಕೂಡಿದಂತೆ ಸಮಾರು 150ಕ್ಕೂ ಹೆಚ್ಚು ಕೃತಿಗಳನ್ನು ವಿವಿಧ ಲೇಖಕರಿಂದ ಬರೆಸಿ ಪ್ರಕಟಿಸಿ ಅವುಗಳನ್ನು ಆದಷ್ಟು ಸುಲಭ ಬೆಲೆಗಳಲ್ಲಿ ದೊರೆ

(26 ನೇ ಪುಟ ನೋಡಿ)

# ಮಧುರ ಚೆನ್ನ

—ಎಂ. ಎಸ್. ಮಹಂತಯ್ಯ

ಹಲಸಂಗಿಯ ಚನ್ನಮಲ್ಲಪ್ಪನವರು ಹೊಸ ಕನ್ನಡ ಕಾವ್ಯಕ್ಕೆ ಜಾನಪದ ಸತ್ವವನ್ನು ತುಂಬಿ ಆತ್ಮ ಚಿಂತನೆಯ ಅನುಭಾವ ಮಾರ್ಗದಲ್ಲಿ ನಡೆಸಿ ಆಧ್ಯಾತ್ಮ ಸಾಧನೆಯ ಆತ್ಮ ನಿವೇದನೆಯನ್ನು ಮಾಡಿ 'ಮಧುರ ಚೆನ್ನ'ರಾಗಿ ಮೆರೆದಿದ್ದಾರೆ. 'ನನ್ನ ನಲ್ಲ' ಕೃತಿಯ ಮೂಲಕ ಅವರ ಮಧುರ ಭಕ್ತಿಯ ದರ್ಶನ ವಾಚಕರಿಗೆ ಆಗುತ್ತದೆ.

"ಆಧ್ಯಾತ್ಮನೇ ನಿಚಿತ ಪ್ರಯೋಜನಂ ಎನಗೆ"

—ರತ್ನಾಕರವರ್ಣಿ

ಬಾಳಿಗೆ ಬೆಳಕನ್ನು ನೀಡಬಲ್ಲುದು ಆಧ್ಯಾತ್ಮ. ಆಧ್ಯಾತ್ಮ ಸಾಧನೆ ಭಕ್ತಿ ಸುಲಭ. ನವವಿಧ ಭಕ್ತಿಗಳಲ್ಲಿ ಮಧುರ ಭಕ್ತಿ ಜೀವ ಪರಮರ ಬೆಸುಗೆಗೆ ಶ್ರೇಷ್ಠ. ಶಿವಶರಣರೆಲ್ಲ ಈ ಮಧುರ ಭಕ್ತಿಯಿಂದಲೆ ಪರ ಶಿವನನ್ನೊಲಿಸಿಕೊಂಡರು. ಅವರ ಅನುಭಾವಕ್ಕೆ ಮೂಲ 'ಶರಣ ಸತಿ ಲಿಂಗಪತಿ' ಎಂಬ ಸೂತ್ರ ಇದೇ ಜಾಡಿನಲ್ಲಿ ಹೊಸಗನ್ನಡ ಕಾವ್ಯಕ್ಕೆ ಜಾನಪದ ಸತ್ವವನ್ನು ತುಂಬಿ ಆತ್ಮ ಚಿಂತನೆಯ ಅನುಭಾವದ ಮಾರ್ಗದಲ್ಲಿ ಅದನ್ನು ನಡೆಯಿಸಿಕೊಂಡು ಹೋಗಿ ಸಫಲರಾದವರು ಹಲಸಂಗಿಯ ಚನ್ನಮಲ್ಲಪ್ಪನವರೊಬ್ಬರು. ಅವರ ಕೃತಿಗಳು ಕೆಲವೇ ಆದರೂ, ಅವುಗಳ ಚೆಲುವು ಎಂದಿಗೂ ಮಾಸದಂತಹುದು ಅವರು ಅಧ್ಯಾತ್ಮ ಸಾಧನೆಯ ಆತ್ಮ ನಿವೇದನೆಯನ್ನು 'ಪೂರ್ವರಂಗ, ಕಾಳರಾತ್ರಿ, ಬೆಳಗು, ಆತ್ಮಸಂಶೋಧನೆ' ಗಳಲ್ಲಿ ಸುಂದರವಾದ ಗದ್ಯದಲ್ಲಿ ಹೇಳಿದ್ದಾರೆ. 'ನನ್ನ ನಲ್ಲ' ಮತ್ತು 'ಮಧುರ ಗೀತೆ' ಗಳಲ್ಲಿ ಕವಿ ಕಾವ್ಯ ಕರ್ಪೂರವಿದೆ. ಇವಲ್ಲದೆ ಅವರು ಅರವಿಂದರ ಅನೇಕ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿ ತುಂಬ ಉಪಕಾರ ಮಾಡಿದ್ದಾರೆ. ಅರವಿಂದರೆಂದರೆ ಅವರಿಗೆ ಎಣೆಯಿಲ್ಲದ ಭಕ್ತಿ. ಅರವಿಂದರ ಯೋಗ ಸಾಧನೆ, ಪೂರ್ಣಯೋಗಗಳು ಚೆನ್ನಮಲ್ಲಪ್ಪನವರ ಅನುಭಾವ ಮಾರ್ಗಕ್ಕೆ ಹೊಸ ಬೆಳಕನ್ನು ನೀಡಿವೆ.

ಚೆನ್ನಮಲ್ಲಪ್ಪನವರ ಜೀವದ ಗೆಳೆಯ ಮಾದಣ್ಣ. ಆತನಿವರನ್ನು ಕುರಿತು

> ಜನರಾಡಿಕೊಳಬಹುದು ನನಗೂ ನಿನಗೂ ಕೂಡೆ
> ಅವರೇನು ಬಲ್ಲರೋ ಒಳ ನಿಧಾನ।
> ನನಗೆ ನೀನತಿ ಮಧುರ ನಿನಗೆ ನಾ ಬಲು ಚೆನ್ನ
> ಹೀಗೆಂತಲೇ ನಾವು "ಮಧುರ ಚೆನ್ನ" ॥

ಎಂದು ಹೊಗಳಿದ್ದಾನೆ. ಅಂದಿನಿಂದ ಮಧುರ ಚೆನ್ನ ಎಂಬುದೇ ಚೆನ್ನಮಲ್ಲಪ್ಪನವರ ಕಾವ್ಯನಾಮವಾಯಿತು. ಅನುಭಾವದ ಕಾವ್ಯವಾಹಿನಿಗೆ ಪುಟಕೊಟ್ಟಿತು.

ಚೆನ್ನ ಮಲ್ಲಪ್ಪನವರ ಪೂರ್ವಿಕರದು ಗಲಗಲಿ. ಅವರ ಅಜ್ಜನ ಕಾಲಕ್ಕಾಗಲೆ ಹಲಸಂಗಿ ಸ್ಥಿರವಾಸವಾಗಿತ್ತು. ಚೆನ್ನಮಲ್ಲಪ್ಪನವರು ಹುಟ್ಟಿದ್ದು ೩೧ ಜುಲೈ ೧೯೦೩; ಹುಟ್ಟಿದುದು ಒಂದು ಒಕ್ಕಲು ಮನೆತನ. ತಂದೆ ಸಿದ್ಧಲಿಂಗಪ್ಪ ಇವರ ಎಳೆ ವಯಸ್ಸಿನಲ್ಲೇ ಕ್ಷಯರೋಗಕ್ಕೆ ಬಲಿಯಾದರು. ತಾಯಿ ಅಂಬವ್ವ ತಾನೇ ಒಕ್ಕಲುತನ ನಡೆಸಿ ಸಂಸಾರ ತೂಗಿಸಿಕೊಂಡು ಹೋದಳು. ಮಗನನ್ನು ಮುಲಕೀ ವರೆಗೆ ಓದಿಸಿದಳು. ಆಗಿನ ಕಾಲಕ್ಕೆ ಮುಲಕೀ ಪರೀಕ್ಷೆ ಹಳ್ಳಿಗರಿಗೆ ದೊಡ್ಡದು. ಚೆನ್ನಮಲ್ಲಪ್ಪನವರು ೧೯೨೧ ರಲ್ಲಿ ಆದನ್ನು ಮೊದಲಸಲವೇ ಪಾಸಾಗಿ ಹಲಸಂಗಿಗೇ ಹೆಸರು ತಂದರು. ಹೆಚ್ಚಿನ ಓದಿಗೆ ಮೈಸೂರು, ಧಾರವಾಡಗಳಿಗೆ ಹೋಗಲೆಳಸಿದರು. ತಾಯಿ ಒಪ್ಪಲಿಲ್ಲ, ಮದುವೆ ಮಾಡಿದಳು. ಸೋದರಿಕೆಯ ಸಂಬಂಧದ ಬಸಮ್ಮನೆಂಬ ಹುಡುಗಿಯನ್ನು ಮಗನಿಗೆ ತಂದುಕೊಂಡಳು. ಆದರೆ ೧೨ರ ಪ್ರಾಯದಿಂದಲೇ ಜಿಜ್ಞಾಸುಗಳಾಗಿದ್ದ ಚೆನ್ನಮಲ್ಲಪ್ಪನವರಿಗೆ ಹೆಚ್ಚಿನ ವಿದ್ಯೆಯು ಬೇಕೆನಿಸಿತು. ಅವರು ವಿಜಾಪುರಕ್ಕೆ ಬಂದರು. ಕೊಣ್ಣೂರ ಹನುಮಂತರಾಯರಲ್ಲಿ ಖಾಸಗಿಯಾಗಿ ವಿದ್ಯಾಭ್ಯಾಸಕ್ಕೆ ತೊಡಗಿದ್ದರು.

ಅಲ್ಲಿರುವಾಗಲೆ ಅವರ ಸಾಹಿತ್ಯರಚನೆಗೆ, ಆಧ್ಯಾತ್ಮ ಸಾಧನೆಗೆ ಪ್ರಚೋದನೆ ದೊರೆಯಿತು. ಸರ್ವಶ್ರೀ ಧೂಲಾ, ಲಿಂಗಣ್ಣ, ರೇವಪ್ಪ ಮೊದಲಾದವರು ಹತ್ತಿರದ ಗೆಳೆಯರಾದರು. ವಿಜಾಪುರದಲ್ಲಿರುವಾಗಲೇ ೧೯೩೩ ರಲ್ಲಿ ವರಕವಿ ಬೇಂದ್ರೆಯವರು ಚೆನ್ನಮಲ್ಲಪ್ಪನವರನ್ನು ಪ್ರಶಂಸಿಸಿ

ಎರೆಯುವೆನು ಬಾನಿನ್ನ ನಮ್ಮ ಪಟ್ಟದ ಮರಿಯೇ
ಸಕಲ ತೀರ್ಥದ ಕ್ಷೀರನೀರ ತಂದು ।
ಬೆರಗಾಗಿ ಬೆರೆತು ಆ ಶಿವನಲ್ಲಿ ದೇವನಲಿ
ಪಡೆದಪ್ಪನಾಗು ಎಂದು ॥

ಎಂದು ಮುಕ್ತ ಕಂಠದಿಂದ ಹರಸಿದರು. ಮುಂದೆ ತಾಯಿಯ ಒತ್ತಾಯಕ್ಕೆ ಸಿಕ್ಕಿ ಅಭ್ಯಾಸಕ್ಕೆ ತಿಲಾಂಜಲಿಯಿತ್ತು ಮಧುರ ಚೆನ್ನರು ಹಲಸಂಗಿಗೆ ಮರಳಿದರು. ಅಲ್ಲಿ ತಾಯಿಯ ಮೂರ್ಖತನ, ದುಂದುಗಾರಿಕೆಗಳು ಅವರಿಗೆ ಕುತ್ತಾದವು. ಇದಲ್ಲದೆ ಸೊಸೆಯಾದವಳ ಮೇಲೆ ಅತ್ತೆಯ ಅಧಿಕಾರ. ಹೀಗಾಗಿ ಚೆನ್ನಮಲ್ಲಪ್ಪನವರು ಊರಿಗೆ ಎರಡು ಮೈಲಿ ದೂರದ ತಮ್ಮ ತೋಟದ ಗುಡಿಸಿಲಿನಲ್ಲಿ ವಾಸಮಾಡತೊಡಗಿದರು. ಅದು ಬರಿಯ ಕಾಡು. ರಾತ್ರಿಯ ಭೀಕರತೆ ಹೆಚ್ಚು; ಮಂದದ ಕಂದೀಲಿನ ಬೆಳಕು ವಿನಾ ಮತ್ತೇನೂ ಇರುತ್ತಿರಲಿಲ್ಲ. ಅವರೊಡನೆ ಆಗಾಗ ಅವರ ಮಡದಿ ಬಸಮ್ಮ, ಅವರ ಆತ್ಮೀಯ ಗೆಳೆಯ ಮಾದಣ್ಣ ಇರುತ್ತಿದ್ದರು. ಹೀಗಾಗಿ ಒಂಟಿತನದಲ್ಲಿ ಚೆನ್ನಮಲ್ಲಪ್ಪನವರಿಗೆ ಆಧ್ಯಾತ್ಮದ ಬಗ್ಗೆ ಜಿಜ್ಞಾಸೆ ಹೆಚ್ಚಿತು; ಅವರು ಅನುಭಾವಿಗಳನ್ನು ಹಿಂಬಾಲಿಸಿದರು. 'ದೇವರಿದ್ದಾನೆಯೇ? ಎಲ್ಲಿ? ತೋರಿಸಿ' ಎಂದು ಸಾಧುಸಂತರನ್ನು ಪ್ರಶ್ನಿಸಿದರು. ಸಮರ್ಪಕವಾದ ಉತ್ತರ ದೊರೆಯದಿರಲು, ಅವರ ಮನಸ್ಸು ನಾಸ್ತಿಕತೆಯ ಕಡೆ ವಾಲಿತು. ಧರ್ಮದ ಚಿಹ್ನವಾದ ಲಿಂಗವನ್ನು ತೊರೆದರು. ಜನರಾಡಿಕೊಂಡರೂ, ಮಠಾಧೀಶರು ಕರೆಸಿ ಕೇಳಿದರೂ ಅವರು ಸೊಪ್ಪು ಹಾಕಲಿಲ್ಲ. ಜಿಜ್ಞಾಸೆ ಹೆಚ್ಚಿದಂತೆಲ್ಲ ಶಾಸ್ತ್ರಾಭ್ಯಾಸಕ್ಕೆ ತೊಡಗಿದರು. ವಿವೇಕಾನಂದರ ಜೀವನ, ಕೃತಿಗಳು ಅವರನ್ನು ಮತ್ತೆ ಆಸ್ತಿಕರನ್ನಾಗಿ ಮಾಡಿದವು. ಅಂದಿನಿಂದ ಚೆನ್ನಮಲ್ಲಪ್ಪನವರು ಶರಣರ ಅನುಭಾವ ಸಾಹಿತ್ಯವನ್ನೂ, ದಾಸರ ಕೃತಿಗಳನ್ನೂ, ಕನ್ನಡದ ಆಧ್ಯಾತ್ಮ ಕೃತಿಗಳನ್ನೂ, ಸಂತರ ಅಭಂಗಗಳನ್ನೂ, ಬೈಬಲ್-ಕುರಾನ್-ಭಗವದ್ಗೀತೆಗಳನ್ನೂ, ತತ್ವಶಾಸ್ತ್ರದ ಗ್ರಂಥಗಳನ್ನೂ, ಅರವಿಂದರ ರಚನೆಗಳನ್ನೂ ಆಳವಾಗಿ ಅಭ್ಯಾಸಮಾಡಿದರು. ಇದರಿಂದ ಅರವಿಂದರ ಬಗ್ಗೆ ಭಕ್ತಿ ಹೆಚ್ಚಿತು. ಅವರ ದೃಷ್ಟಿ ವಿಶಾಲವಾಯಿತು. ಸಾಧನೆಯ ಹಾದಿಯಲ್ಲಿ ಅನುಭೂತಿ ಹೆಚ್ಚುತ್ತಾ ಹೋಯಿತು. ಇಷ್ಟಾದರೂ ಅವರಿಗೆ ತೃಪ್ತಿಯಾಗಲಿಲ್ಲ. ಆಗಾಗ ಕಾಯಿಲೆ ಕಸಾರಿಕೆಗಳಿಂದ ಅವರ ದೇಹ ಬಳಲಿ ಬೆಂಡಾದರೂ, ಅವರ ಆತ್ಮಶಕ್ತಿ ಕುಂಠಿತವಾಗಲಿಲ್ಲ; ಅದು ಬೆಳೆಯುತ್ತಾ ಹೋಯಿತು. ಸಂಸಾರ ತಾಪತ್ರಯ ಅವರ ಬೆನ್ನು ಬಿಟ್ಟಿರಲಿಲ್ಲ. ಸಾಲಗಾರರ ಕಾಟ, ಮಡದಿ ಮಕ್ಕಳ ಕಾಯಿಲೆ, ತಾಯಿಯ ಹಟ, ಬಡತನದ ಬೇಗೆ, ಗ್ರಂಥಪ್ರಕಟನೆಯ ಮರುಳುತನ ಇತ್ಯಾದಿ ಅವರನ್ನು ಹಣ್ಣು ಮಾಡಿದರೂ, ಆತ್ಮೀಯ ಗೆಳೆಯರ ಒಡನಾಟ, ಆರೈಕೆಗಳಿಂದ ಅವರು ಚೇತರಿಸಿಕೊಂಡು ಮತ್ತೆ ಮತ್ತೆ ಭಗವದ್ದರ್ಶನಕಾತರರಾಗುತ್ತಿದ್ದರು. ಅವರ ಮನಸ್ಸಿನ ಹೊಯ್ದಾಟ ಇಲ್ಲಿ ವ್ಯಕ್ತವಾಗಿದೆ.

ಘೋರಾಂಧಕಾರದಲಿ ಬೆಳಕು ಮುಚ್ಚಿದಬಲ್ಲ
ಬಟ್ಟ ಬಯಲನೆ ಗಟ್ಟಗೊಳಿಸಬಲ್ಲ ।
ಹಿರಿದಾ ಮಹಿಮ ತಾನೆಲ್ಲ ಬಲ್ಲನಯ್ಯ
ನಮ್ಮ ಮನಸನ್ನೇಕೆ ತಿಳಿಯಲೊಲ್ಲ? ॥

ಎಂದು ಪ್ರಶ್ನಿಸಿ—

ಹುಟ್ಟಿಸೆಂದಾತನಿಗೆ ಬಿನ್ನವಿಸಿದವರಾರೋ
ಕೆಟ್ಟಕೃತಿ ತಡೆಯು ಬೇಡೆಂದವರಾರೋ ।
ಇಷ್ಟೆಲ್ಲ ತಾ ಮಾಡಿ ತಪ್ಪ ಹೊರಿಸಿದ ಬಳಿಕ
ಸೆರೆಸಿಕ್ಕ ಜೀವರಿಗೆ ದಿಕ್ಕು ಯಾರೋ ॥

ಎಂದು ಹಲುಬಿದರೂ ಅವರಿಗೆ ದೇವರ ಕೃಪೆ ಉಂಟಾಗಲಿಲ್ಲ. ಮತ್ತೆ ಕೆರಳಿ "ನೀ ಹುಟ್ಟಿಸಿದರೆ ಹುಟ್ಟಿದೆನಲ್ಲದೆ ನನಗಿಲ್ಲಿತ್ತೇನು? ನೀ ಹುಟ್ಟಿಸಿದವ ಹೊರಳಿ ನೋಡಿದಿರೆ ಗತಿಯೆನಗಿನ್ನೇನು? ಎಂದು ವಿಡಂಬಿಸಿದರು ಏನಾದರೂ ಅವರ ಮೊರೆ ತಪ್ಪಲಿಲ್ಲ; ತೃಷೆ ತಣಿಯಲಿಲ್ಲ.

ಮಧುರ ಚೆನ್ನರಿಗೆ ಅಕ್ಕಮಹಾದೇವಿಯ ಅನುಭಾವ ಮಾರ್ಗ ಕಣ್ಣಮುಂದೆ ಸುಳಿದಿತ್ತು. ಒಮ್ಮೆ ಅವರು ಕುಣಿವ ನವಿಲನ್ನು ಕಂಡು ಅವರ ಬೆನ್ನು ಬಿದ್ದರು.

ಸಿಲ್ಲು ಸಿಲ್ಲಲೆ ನವಿಲೆ ನಿನ್ನ ಕಂಣುಗಳೇಸು
ಕಂಣ ಬಂಣಗಳೇಸು ಎಣಿಸಲಾರೆ?
ಎಲ್ಲ ರೂಪಿಸಿದವನು ಎಲ್ಲಿ ತಾನಡಗಿದನೆ
ತಾಳಲಾರದು ಜೀವ ಹೇಳಬಾರೇ ॥

ಎಂದು ಬೇಡಿದರು. ಉತ್ತರವಿಲ್ಲದೆ ಮನಸ್ಸು ಖಿನ್ನವಾಯಿತು. "ಸಿಳುಕಿಸದ ಸಿರಿಗಣ್ಣು ಬೆಳ್ಳಿ ಮಿರುಗಿನ ಮಯ್ಯ" ಮಿಾನ ಮೂರುತಿಯೊಂದು ಅವರ ಕಣ್ಣ ಮುಂದೆ ಸುಳಿಯಿತು; ಆಶೆ ಮತ್ತೆ ಗರಿಗೆದರಿತು; "ತಿಳಿ ಗಂಗೆ ನಿಮ್ಮವ್ವೆ ಮಿಾನ ಮೂರುತಿ ತಿಳಿಸೊ। ನನ್ನೊಡೆಯ ನಡಗಿರುವನಾವಕಡೆಗೆ॥" ಎಂದು ಪ್ರಶ್ನಿಸಿದರು. ಅಲ್ಲಿಯೂ ನಿರಾಶೆಯೇ! ಆದರೆ ಜಿಜ್ಞಾಸೆ ತಪ್ಪಲಿಲ್ಲ. ತಲೆಯೆತ್ತಿ ನೋಡಿದಾಗ ಹಾರಾಡುವ ಮಿಂಚುಹುಳು ಕಣ್ಸೆಳೆಯಿತು--

ಅರದಾರತಿ ಹಿಡಿದು ಹಾರುತಿರುವವಳಾರೆ
ಹೊನ್ನ ಐ ಹೊನ್ನ! ನೀನಾರೆ ಜಾರೆ!
ಯಾರಿಗಾರತಿ ಒಯ್ವೆ? ಹೇಳೆ ನಾನೂ ಬರುವೆ,
ನನ್ನರಸನಿದ್ದಾನು ಅಲ್ಲಿಯಾರೇ॥

ಎಂದು ಕವಿಚೇತನ ಬಾಯ್ಬಿಟ್ಟಿತು. ಇಲ್ಲಿ ಕೂಡ ನಿರಾಶೆಯೇ ಕಟ್ಟಿಟ್ಟ ಬುತ್ತಿ. ಆದರೂ ಕವಿ ಸೋಲಲಿಲ್ಲ. 'ಶರಣಸತಿ ಲಿಂಗಪತಿ' ಎಂಬ ಮಧುರ ಭಕ್ತಿಯ ಭರದಲ್ಲಿ ಗಿಳಿ, ಕೋಗಿಲೆ, ಭೂದೇವಿ, ಮಲ್ಲಿಗೆ, ತಾರಗೆ, ಟೇಂಪಕ್ಕಿ ಮೊದಲಾದುವನ್ನು ಪ್ರಶ್ನಿಸಿದರೂ ಉಪಯೋಗವಾಗಲಿಲ್ಲ. ತಾಪ ಹೆಚ್ಚಲು ತಂಗಾಳಿ ಬೀಸಿತು; ಆಶೆಮಿಂಚಿತು. ಆ ಶೀತಲ ಸ್ಪರ್ಶದಿಂದ ತನು ಪುಳಕಗೊಂಡಿತು--

ತೋರಲಾರದ ಗಾಳಿ ತಟ್ಟಿ ತಿಳಿಸುವಿ ಏನು
ಯಾವ ನಾಡಿನ ಸೀಮೆ ತುಳಿದು ಬಂದೆ?
ಮಿಾರಿತೆನ್ನಯ ತಾಪ ಆರಿಸೆನ್ನಯ ತಂದೆ
ನನ್ನ ರಾಯನ ಸುದ್ದಿ ಸಾರು ಇಂದೇ॥

ಎಂದು ಮನ ಮೊರೆಯಿತು. ಆದರೆ ಸಕಲ ಜಾತಕ್ಕೆ ಪ್ರಾಣಾಧಾರವಾದ ಪ್ರಾಣದೇವರಿಗೂ ಕರುಣೆ ಬರಲಿಲ್ಲ. ಕವಿಯ ಆರ್ತತೆ ಅಧಿಕವಾಯಿತು. ಅನುಭಾವದ ಹೊಳೆ ಹರಿಯಿತು "ಮೊರೆವೆ 'ಕಾಮಾರ್ತಾಹಿ ಪ್ರಕೃತಿ ಕೃಪಣಾಶ್ಚೇತನಾಚೇತನೇಷು' ಎಂಬಂತೆ ನಿಮಗೆ" ಎಂದು ತರು ಮರಾದಿಗಳನ್ನು ಬೇಡಿತು.

ನನ್ನ ಕಂಣೀರಿನಿ ಕಲ್ಲು ಕರಗುತಲಿಹುದು
ನನ್ನೊಡನೆ ದಿಕ್ಕು ದನಿಗುಡುತಲಿಹುದು।
ನನ್ನ ನಿಟ್ಟುಸುರಿನಲಿ ಬನವು ಬಾಡುತಲಿಹುದು
ಕರುಳೆಂಬ ಕರುಳೇಕೆ ಕರಗದಿಹುದು?

'ಜಡವೊ ಚೇತನವೊ ಬಯಕೆ ಮರುಳರಿಗೆ ಯಾವ ವಸ್ತುವೇನು?' ಎಂಬಂತೆ ಸಕಲ ಚರಾಚರಕ್ಕೆ ಕೈ ಮುಗಿದು ಕಕ್ಕುಲತೆಯಿಂದ ಬೇಡುವ ಕವಿಚೇತನಕ್ಕೆ ತನ್ನ ಅಂತಃಸಾಕ್ಷಿಯೇ ಸಮಾಧಾನ ನೀಡುತ್ತದೆ. ಎಲ್ಲ ತೊಡಕುಗಳಿಗೂ 'ತನ್ನ ಅರಿವೇ ಗುರು' ವಾಗುತ್ತದೆ. "ಭಾವ ಬುದ್ಧಿಗಳೆರಡೆ ತಿಳುವಳಿಕೆಗಾಧಾರ। ಭಾವಕ್ಕೆ ಬುದ್ಧಿಯೇ ಬಾಹ್ಯನೇತ್ರ!" ವೆಂದು ಸಾರಿ, "ಭಾವ ಕೊಲಿಯದ ಬುದ್ಧಿ, ಬುದ್ಧಿಗೊಲಿಯದ ಭಾವ! ಇಲ್ಲೇ ಕಾಣಯ್ಯ ಸಂದೇಹ ಸೂತ್ರ" ಎಂದು ಭಾವ ಬುದ್ಧಿಗಳ ಸಮನ್ವಯದ ಅವಶ್ಯಕತೆಯನ್ನೂ ಹೇಳುತ್ತದೆ. ಅದೂ ಅಲ್ಲದೆ—

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವುದರ ಕಣ್ಸನ್ನೆ ಕಾಣೋ।
ಅರಿಯದಾ ಹವಣಿಕೆಯು ಜೀವ ಜೀವನ ಲೀಲೆ
ದೇವ ದೇವನ ಗೂಢನಿಧಿಯು ಕಾಣೋ॥

ಎಂದು ಜೀವನದ ತೊಳಲಾಟಕ್ಕೆ ಒಂದು ನೆಲೆ ದೊರೆತಂತಾಯಿತು. ಮನಸ್ಸಿಗೆ ಸಮಾಧಾನವಾಯಿತು.

ಹೀಗೆ, ಅನುಭಾವಿಗಳಾದ ಮಧುರ ಚೆನ್ನರು ತಮ್ಮ ಅಂತರಂಗವನ್ನೆಲ್ಲ 'ನನ್ನನಲ್ಲ' (ಮಧುರ ಗೀತೆ) ಗಳ ಮೂಲಕ ಸುಲಭವಾದ ಶೈಲಿಯಲ್ಲಿ ಶೃತಪಡಿಸಿದರು ಅವರ ೧೪ ವರ್ಷಗಳ ಹರಕೆ ೧೫ ಆಗಸ್ಟ್ ೧೯೫೫ರಲ್ಲಿ ಕೈಗೂಡಿತು; ಪಾಂಡಿಚೇರಿಯಲ್ಲಿ ಶ್ರೀ ಮಾತಾ-ಅರವಿಂದರುಗಳ ದರ್ಶನ ಲಾಭವಾಯಿತು. ಅವರ ಜನ್ಮ ಸಫಲವಾಯಿತು. ಅರವಿಂದಾಶ್ರಮದ ಬಗ್ಗೆ ಭಕ್ತಿ ಹೆಚ್ಚಿತು. ಮನಸ್ಸಿಗೆ ಸ್ವಾಸ್ಥ್ಯ ದೊರಕಿತು. ಇಷ್ಟೆಲ್ಲ ಉಸುರಿದರೂ ಅವರು—

ಹುಚ್ಚುತನವೋ ಕಾಣೆ ಜಾಣತನವೋ ಕಾಣೆ
ಹುಚ್ಚುತನ ಯಾರಿಗೂ ಬಿಟ್ಟಿಯಿಲ್ಲ।
ಅಚ್ಚ ಅನುಭವ ರಾಶಿ ಬಿಚ್ಚ ಬೈಲಿಗೆಯಿಟ್ಟೆ
ಮುಚ್ಚು ಮರೆಯಿದರೊಳೇನೇನು ಇಲ್ಲಾ॥

ಎಂದು ತಮ್ಮ ಅಂತರಾಳವನ್ನೇ ತೆರೆದಿಟ್ಟಿದ್ದಾರೆ. ಹೀಗೆ ಅವರು ಅನುಭಾವಿಗಳಾಗಿ, ಸಾಹಿತಿಗಳಾಗಿ ಅನೇಕ ಕೃತಿಗಳನ್ನು ಕನ್ನಡಕ್ಕಿತ್ತರು. ತಮ್ಮ ೬೦ ನೆಯ ವಯಸ್ಸಿನಲ್ಲಿ, ಅಂದರೆ ಆಗಸ್ಟ್ ೧೫, ೧೯೬೩ ರಂದು, ಅವರು ಕರುಳಿನ ಕ್ಯಾನ್ಸರ್ ಬೇನೆಗೆ ತುತ್ತಾಗಿ ಕಣ್ಣುಮುಚ್ಚಿ ಇಹದ ಮಣಿಹವನ್ನು ಮುಗಿಸಿದರು.

ಇವರ ಕೃತಿಗಳು ರಸದ ಚಿಲುಮೆಗಳು. ಇಂಥ ಕವಿಚೇತನ ಪಡೆದ ಕನ್ನಡ ಸಾಹಿತ್ಯ ಧನ್ಯ. —

# ಹರಿಹರದೇವನ ಶಂಕರದಾಸಿಮಯ್ಯನ ರಗಳೆ

—ಡಾ. ಎಸ್. ವಿದ್ಯಾಶಂಕರ.

> ವೀರಶೈವ ಮತ ಹೋರಾಟ ನಡೆಸಿಯೇ ತನ್ನ ಅಸ್ತಿತ್ವವನ್ನು ಕಾಣಬೇಕಾಗಿದ್ದ ಅಂದಿನ ದಿನಗಳಲ್ಲಿ ಶಂಕರ ದಾಸಿಮಯ್ಯನಂತ ವೀರಶೈವ ಧರ್ಮದ ಪ್ರಾರಂಭದೆಸೆಯ ಸ್ಥೂಲ ಚಿತ್ರವನ್ನು ಹರಿಹರದೇವನ ಈ ರಗಳೆಯಲ್ಲಿ ಕಾಣಬಹುದು.

'ಶಂಕರದಾಸಿಮಯ್ಯನ ರಗಳೆ' ಮೂರು ಸ್ಥಲಗಳಿಂದ ಕೂಡಿದ ಪುಟ್ಟ ಕೃತಿ. ಜೇಡರ ದಾಸಿಮಯ್ಯ ಹಾಗೂ ಶಂಕರ ದಾಸಿಮಯ್ಯ- ಇವರಿಬ್ಬರೂ ಸಮಕಾಲೀನರಾಗಿದ್ದು ಚಾಲುಕ್ಯ ಜಯಸಿಂಹನ (ಕ್ರಿ ಶ 1015-42) ಕಾಲದಲ್ಲಿ ಇದ್ದವರೆಂದು ಹರಿಹರದೇವನ 'ಶಂಕರ ದಾಸಿಮಯ್ಯನ ರಗಳೆ' ಹಾಗೂ ಭೀಮಕವಿಯ ಬಸವ ಪುರಾಣಗಳಿಂದ ತಿಳಿದು ಬರುತ್ತದೆ. ಇವರಿಬ್ಬರೂ ವಚನಕಾರರು. 'ರಾಮನಾಥ' ಹಾಗೂ 'ನಿಜಗುರು ಶಂಕರದೇವ' ಎಂಬುದು ಕ್ರಮವಾಗಿ ಇವರ ಅಂಕಿತಗಳು. ಇವರು ಬಸವಣ್ಣನಿಗಿಂತ ಹಿಂದೆ ಇದ್ದ ಮಹಾನ್ ಶರಣರು. ಇವರು ತಮ್ಮ ಚಾರಿತ್ರ, ವಾದ ವಿಜಯಗಳಿಂದ ಅದಾಗ ಕಣ್ಣು ಬಿಡುತ್ತಿದ್ದ ವೀರಶೈವ ಮತದ ಪ್ರವರ್ಧನೆಗೆ ಕಾರಣರಾದರೆಂದು ಹೇಳಿದರೆ ತಪ್ಪಾಗಲಾರದು ಇವರಿಂದ ಬಸವಯುಗದ ಕ್ರಾಂತಿಗೆ ಒಂದು ಹಿನ್ನೆಲೆಯೂ ವಚನವಾಙ್ಮಯಕ್ಕೆ ಒಂದು ತಳಹದಿಯೂ ಪ್ರಾಪ್ತವಾಯಿತು.

ಕಂದಶಿಲೆಯ ಗೋವಿಂದದೇವ ಹಾಗೂ ಅಮ್ಮವ್ವೆಯೆಂಬ ವೃದ್ಧ ಬ್ರಾಹ್ಮಣ ದಂಪತಿಗಳು ವೈರಾಗ್ಯದಿಂದ ವಾರಣಾಸಿಗೆ ಹೋಗುತ್ತ ಕಂದಶಿಲೆಗೆ ಒಂದು ಗಾವುದ ದೂರದಲ್ಲಿರುವ ನವಿಲೆಯ ಜಡೆಯ ಶಂಕರದೇವರ ಆಲಯದಲ್ಲಿ ವಿಶ್ರಮಿಸಿರಲು ಜಡೆಯ ಶಂಕರನಿಗೆ ಮಾಡುವ ಪೂಜಾಸಂಭ್ರಮವನ್ನು ನೋಡಿ ಇನ್ನೇಕೆ ವಾರಣಾಸಿಯ ಪಯಣವೆಂದು ನಿಶ್ಚಯಿಸಿ, ಜಡೆಯಶಂಕರನನ್ನು ಸರ್ವಸ್ವವೆಂದು ಭಾವಿಸಿ, ನಿತ್ಯವೂ ಕಂದಶಿಲೆಯಿಂದ ನವಿಲೆಗೆ ಚಳಿಮಳೆಗಾಳಿಯೆನ್ನದೆ ಬಂದು ಶಂಕರನನ್ನು ಓಲೈಸುತ್ತಿರಲು ಒಂದು ದಿನ ಗೋವಿಂದದೇವನ ಕನಸಿನಲ್ಲಿ ಶಂಕರ ಬಂದು "ಚಳಿಮಳೆಯಲ್ಲಿ ಎಡೆಯಾಡಲೇಕೆ, ನಲಿವುಮಿಗೆಯೊಲವಿಂದ ನಮ್ಮೂರ್ಗೆ ಬಾರಯ್ಯ. ಬಂದೊಡುಪದೇಶಮಂ ಮಾಡಿ ಕರುಣಿಸೆ"ನೆಂದು ಆಜ್ಞೆಮಾಡಲು ಸತಿಯೊಡನೆ ನವಿಲೆಗೆ ಬಂದು ನೆಲೆಸಿದನು. ಶಿವನಿಂದ ಗೋವಿಂದದೇವ ನೊಸಲ ಕಣ್ಣನ್ನು ಪಡೆದನು. ಪರಮತ, ಪರದೈವಗಳನ್ನು ಸುಟ್ಟು ಪುರವನ್ನೂ ಸುಡುತ್ತಿರಲು ಶಿವನು ಮುನ್ನೆಚ್ಚರಿಕೆ ವಹಿಸಿ ಅವನ ಮುಖಕ್ಕೆ ನಂದಿಯ ಮೊಗವಾಡವನು ಇಕ್ಕಿದನು. ಆ ಭಕ್ತ ದಂಪತಿಗಳಿಗೆ ಶಿವನು ಶಂಕರದಾಸಿಮಯ್ಯ–ಶಿವದಾಸಿ ಎಂಬ ನೂತನ ನಾಮವನ್ನು ಅನುಗ್ರಹಿಸಿದನು. ಶಿವನಿಂದ ವಕ್ರಪಾದನೆಂಬ ಶಿಷ್ಯನನ್ನು ಪಡೆದು ಹೆಂಡತಿ ಹಾಗೂ ಶಿಷ್ಯನೊಡನೆ ನವಿಲೆಯಿಂದ ಹೊರಟು ಪಶ್ಚಿಮಾಭಿಮುಖವಾಗಿ ಬರುತ್ತ "ನೋಡಿದರ್ಗೆ ಶೈವ ಸಂಪದಮಂ ನೀವುತಂ ನುಡಿಸಿದರ್ಗೆ ಧರಣೀಶ್ವರತ್ವಮಂ ಕರುಣಿಸುತ್ತುಂ ಮೆಟ್ಟಿದ ಪ್ರಾಣಿಗಳಂ ಸ್ವರ್ಗಕ್ಕೆ ಕಳುಪುತಂ ಮುಟ್ಟಿದರಂ ಮುಕ್ತಿಗೆ ಕಳುಪುತಂ ಕೆಲವೆಡೆ ಗೈದಿ ಪಲವೂರ್ಗಳಂ ಕಳೆದು (ಸ್ಥಲ. 2 ಸಾಲು 47-49) ಮುದನೂರಿನ ರಾಮನಾಥ ದೇವಸ್ಥಾನದಲ್ಲಿದ್ದ ಜೇಡರ ದಾಸಿಮಯ್ಯ–ದುಗ್ಗಳೆಯರ ತವನಿಧಿಯನ್ನು ತವಿಸಿ ಅವರ ಅಹಂಕಾರವನ್ನು ಭಂಗಿಸಿ, ತವನಿಧಿಯನ್ನು ಮರಳಿ ಅವರಿಗೇ ಅನುಗ್ರಹಿಸಿದನು. ಅಲ್ಲಿಂದ ಮುಂದೆ ಜಯಸಿಂಹನಾಳುವ ಕಲ್ಯಾಣಕ್ಕೆ ಬಂದು ಅಲ್ಲಿನ ನರಸಿಂಹ ವಿಗ್ರಹವನ್ನು ತನ್ನ ಉರಿಗಣ್ಣಿನಿಂದ ಭೇದಿಸಿ ಜಯಸಿಂಹ

ಹಾಗೂ ವೈಷ್ಣವವಾದಿಗಳು ಶರಣುಬರಲು ಅವರಿಗೆ ಅಭಯವಿತ್ತು ಅಲ್ಲಿಂದ ಮುಂದೆ ಪೆಂಬೇರಕ್ಕೆ ಬಂದು ಆ ಊರ ಹೊರಗಿರುವ ಮೈಲಾರನಿಂದ ಸೇವೆಯನ್ನು ಸ್ವೀಕರಿಸಿ, ಕೊಡೆವಿಡಿಸಿಕೊಂಡು, ಭೈರವನನ್ನು ಕರುಣಿಸಿ ನವಿಲೆಗೆ ಶಂಕರದಾಸಿಮಯ್ಯ ದಂಪತಿಗಳು ಹಿಂತಿರುಗಿದರು. ಗಣಪರ್ವಕ್ಕೆ ಮಾರಿಕವ್ವೆಯಿಂದ ಕೊಟ್ಟಣವನ್ನು ಮಿದಿಸಿ, ಗಣಪರ್ವವನ್ನು ಮಾಡಿ ಶರಣಾವಳಿಗೆ ಶಂಕರದಾಸಿಮಯ್ಯ ತೃಪ್ತಿಯನ್ನುಂಟುಮಾಡಿದನು. ಶಿವದಾಸಿ ಗರ್ಭಧರಿಸಿ ಸದ್ಯೋಜಾತನೆಂಬ ಮಗನನ್ನು ಹೆತ್ತಳು. ಮಗನಿಗೆ ಎಂಟು ವರ್ಷಗಳಾಗಲು ಶಂಕರದಾಸಿಮಯ್ಯ ಜಡೆಯ ಶಂಕರನ ಸನ್ನಿಧಿಯಲ್ಲಿ ದೀಕ್ಷೆಯನ್ನಿತ್ತು ಉಪದೇಶಿಸಿ ಶಿವ ಭಕ್ತನನ್ನಾಗಿ ಮಾಡಿ ಶರಣರಿಗೆ ಪುತ್ರನನ್ನು ಒಪ್ಪಿಸಿಕೊಟ್ಟು ಅವರಿಂದ ಅಪ್ಪಣೆ ಪಡೆದು ನರಲೋಕದೊಳಗಿರವು ಸಾಕೆಂದು ಬಗೆದು ಜಡೆಯಶಂಕರನನ್ನು ನುತಿಸಿ "ಬೀಜ ದೊಳಗಂಕುರಂ ಪುಗುತಿರ್ಪ ಮಾಳ್ಕೆಯಿಂ" "ನೆಟ್ಟ ನೆ ಜ್ಯೋತಿ ಪರಂಜ್ಯೋತಿಯನಪ್ಪುವಂತೆ" ಜಡೆಯಶಂಕರ ನಲ್ಲಿ ಐಕ್ಯನಾದನು ಕೈಲಾಸಕ್ಕೆ ಬಂದ ಶಂಕರದಾಸಿಮ ಯ್ಯನಿಗೆ ಶಿವ ಸಾರೂಪ್ಯ ಪದವಿತ್ತು ಕರುಣಿಸಿದನು.

ಹರಿಹರದೇವನ "ಶಂಕರದಾಸಿಮಯ್ಯನ ರಗಳೆ" ಚಾರಿತ್ರಿಕ ದೃಷ್ಟಿಯಿಂದ ಬಹು ಮುಖ್ಯವಾದುದು. ಬಸವನಿಗಿಂತ ಸುಮಾರು ನೂರು ವರ್ಷ ಹಿಂದಿನವನಾದ ಶಂಕರದಾಸಿಮಯ್ಯ ವೀರಶೈವಮತವು ಪರಮತಗಳ ಜೊತೆ ಯಲ್ಲಿ ಹೋರಾಡಬೇಕಾಗಿದ್ದ ಕಾಲದಲ್ಲಿ ಅದರ ಉಳಿವಿಗೆ ಪ್ರಯತ್ನಪಟ್ಟು, ವಾದಗಳ ಮೂಲಕ ಪರಮತೀಯರನ್ನು ಜಯಿಸಿ, ಪರಮತವನ್ನು ಮೀರಿ, ಶಿವಾಧಿಕ್ಯವನ್ನು ಸ್ಥಾಪಿಸಿ, ಅದು ಗಟ್ಟನೆಲದಲ್ಲಿ ನೆಲೆಗೊಳ್ಳಲು ಶ್ರಮಿಸಿದ ನಿಷ್ಠಾವಂತ ವ್ಯಕ್ತಿಗಳಲ್ಲಿ ವೀರಮಾಹೇಶ್ವರ ನಿಷ್ಠೆಯನ್ನು ಬೆಳಗಿದವರಲ್ಲಿ-ಶಂಕರದಾಸಿಮಯ್ಯನೂ ಒಬ್ಬ. ಧರ್ಮೋ ದ್ಧಾರಕನಾಗಿ, ವಚನಕಾರನಾಗಿ, ಅನುಭಾವಿಯಾಗಿ ಮೆರೆದ ಶಂಕರದಾಸಿಮಯ್ಯನನ್ನು ಕುರಿತ ಮೊದಲ ಕೃತಿ ಹರಿಹರದೇವನ 'ಶಂಕರದಾಸಿಮಯ್ಯನ ರಗಳೆ'

ಶಂಕರದಾಸಿಮಯ್ಯನಂತಹ ಮಹಿಮಾನ್ವಿತನ ಬಗೆಗೆ ಕೃತಿ ರಚನೆ ಮಾಡ ಹೊರಟಾಗ ಮೊದಲಿಗೆ ಹರಿಹರದೇವ ಆತನ ಬದುಕಿಗೆ ಸಂಬಂಧಿಸಿದಂತೆ ಜನತೆ ಯಲ್ಲಿ ಹಬ್ಬಿ ಹರಡಿದ್ದ ಐತಿಹ್ಯಗಳನ್ನು ಕಲೆಹಾಕಿದನು. ಹರಿಹರದೇವ ಬದುಕ್ಕಿದ್ದ ಕಾಲಕ್ಕಿಂತ ಸುಮಾರು 150 ವರ್ಷಗಳ ಹಿಂದೆ ಇದ್ದ ಶರಣನ ಬಗೆಗೆ ಐತಿಹ್ಯಗಳನ್ನು ಕಲೆಹಾಕುವುದು ಸ್ವಲ್ಪ ಕಷ್ಟಸಾಧ್ಯವಾದ ಕೆಲಸ. ಹರಿ ಹರದೇವನ ಕಾಲಕ್ಕೆ ಜೇಡರ ದಾಸಿಮಯ್ಯ ಹಾಗೂ ಶಂಕರದಾಸಿಮಯ್ಯರ ಬಗೆಗಿನ ಕಥೆಗಳುಪ್ರಚಲಿತವಿದ್ದರೂ ಅವು ಒಂದರೊಡನೊಂದು ಸೇರಿಹೋಗಿದ್ದುವು. ಉದಾ ಹರಣೆಗೆ ಜೇಡರದಾಸಿಮಯ್ಯನು ಮಾಡಿದ ಜಯಸಿಂಹನ ಮತಪರಿವರ್ತನವನ್ನು ಶಂಕರದಾಸಿಮಯ್ಯನು ಮಾಡಿದ ನೆಂದು ಹರಿಹರದೇವ ತನ್ನ ಶಂಕರದಾಸಿಮಯ್ಯನ ರಗಳೆ,ಯ ಎರಡನೇ ಸ್ಥಲದ ಉತ್ತರಾರ್ಧಭಾಗದಲ್ಲಿ ಹೇಳಿ ರುವನು. ಇಂತಹ ಅಸಂಗತಿಯನ್ನು ಬಿಟ್ಟರೆ ಇನ್ನುಳಿದ ಕಡೆಯಲ್ಲೆಲ್ಲಾ ಚರಿತ್ರೆಗೆ ಧಕ್ಕೆ ಬರದ ರೀತಿಯಲ್ಲಿ ಪ್ರಾಮಾ ಣಿಕವಾಗಿ ಹರಿಹರದೇವ ನಡೆದುಕೊಂಡಿರುವನು ಶಂಕರ ದಾಸಿಮಯ್ಯನಿಗೆ ಸದ್ಯೋಜಾತನೆಂಬ ಒಬ್ಬ ಮಗನಾದ ನೆಂದೂ ಆತನಿಗೆ ದೀಕ್ಷೆಯಿತ್ತು ಬೋಧಿಸಿ ಶಿವಭಕ್ತನನ್ನಾ ಗಿಸಿ ಶರಣರಿಗೆ ಅವನನ್ನು ಒಪ್ಪಿಸಿ, ಜಡೆಯಶಂಕರನಲ್ಲಿ ಐಕ್ಯನಾಗಿ ಕೈಲಾಸವನ್ನು ಸೇರಿ ಸಾರೂಪ್ಯಪದವನ್ನು ಅಲ್ಲಿ ಪಡೆದನೆಂದು ಹರಿಹರದೇವ ಹೇಳುವನು. ಇದರಲ್ಲಿ ಮೊದಲನೆಯದು ಬಹು ಗಮನೀಯ ಸಂಗತಿ ಇನ್ನು ಎರಡನೆಯದು ಆತ ಜಡೆಯ ಶಂಕರನಲ್ಲಿ ಐಕ್ಯವಾದುದು, ಕೈಲಾಸದಲ್ಲಿ ಸಾರೂಪ್ಯಪದ ಪಡೆದುದು-ಹರಿಹರದೇವನ ಸಂಪ್ರದಾಯದ ಸಾಂಕೇತಿಕ ಶಿವೈಕ್ಯ.

ವೀರಶೈವ ಮತ ಹೋರಾಟ ನಡೆಸಿಯೇ ತನ್ನ ಅಸ್ತಿತ್ವವನ್ನು ಕಾಣಿಸಬೇಕಾಗಿದ್ದ ಅಂದಿನ ದಿನಗಳಲ್ಲಿ ಶಂಕರದಾಸಿಮಯ್ಯನಂತಹ ವೀರಮಾಹೇಶ್ವರ ನಿಷ್ಠೆಯ ವರು ಅವಶ್ಯವಿದ್ದರೇನೋ! ವೀರಶೈವ ಧರ್ಮದ ಪ್ರಾರಂಭ ದೆಸೆಯ ಒಂದು ಸ್ಥೂಲ ಚಿತ್ರವನ್ನು ಹರಿಹರದೇವನ ಪ್ರಸ್ತುತ ರಗಳೆಯಲ್ಲಿ ನಾವು ಕಾಣಬಹುದು. ಇದರ ಜೊತೆಗೆ ಅಂದಿನ ಸಮಾಜದಲ್ಲಿ ಕಾಳುಮೂಳ ದೈವಗಳು (ಮೈಲಾರ, ಭೈರವ, ಮಾರಿ, ಮಸಣಿ ಇತ್ಯಾದಿ) ಪ್ರಾಧಾನ್ಯ ವಹಿಸಿದ್ದುದನ್ನು ಖಂಡಿಸುವ ಅವುಗಳ ಶಕ್ತಿ ಗುಂದಿಸುವ ಕಾರ್ಯದಲ್ಲಿ ಶಂಕರದಾಸಿಮಯ್ಯನಂತಹ ಮಹಿಮಾನ್ವಿತರು ಹೇಗೆ ಶ್ರಮಿಸಿದರೆನ್ನುವ ಚಿತ್ರವನ್ನೂ ಪ್ರಸ್ತುತ ರಗಳೆಯಲ್ಲಿ ನಾವು ನೋಡಬಹುದು.





# ಕಾಲನ ಸೋಲು

[ಗೀತ ರೂಪಕ]

— ರಚನೆ —
ಶ್ರೀ ಗಣಪತಿ ಮೊಳೆಯೂರ

|| ದೃಶ್ಯ ೧ ||

ಕರುಣಾನಿವಾಸ ನೀನ
ದೇವ ದೇವ ಕಾಪಾಡೈ
ನಿನ್ನೀ ಭಕುತೆಗೆನಗೆ ನೀನ
ಸೌಭಾಗ್ಯ ವರವನಿಂದು ನೀಡೈ

**ಸಾವಿತ್ರಿ :**

ಮೂಡದಿರು, ಪ್ರತ್ಯೂಷೆಯೆ, ನೀನಿಂದು ಮೂಡದಿರು :
ನಲ್ಲನಳಿಯುವ ದಿನವನೆನಗೆ ನೀಡದಿರು !
ಜಗಕೆ ಬೆಳಕನ್ನೀವ ದೇವ, ಶತಕಿರಣ,
ಬಾಳಿಗೀಯದಿರೆನ್ನ ದುಃಖದಾವರಣ !

ವಿಧಿನಿಯಮದನುಸಾರವೀ ದಿನವೆ ಕಡೆಯು
ಮುರುಟುವುದು ಇನಿಯನಾ ಬಾಳ ದಾಂಗುಡಿಯು
ತನ್ನ ಧರ್ಮವ ನಡೆಸೆ ಯಮಧರ್ಮ ಬಹನು
ನನ್ನಾರ್ಯಪುತ್ರನಿಗೆ ಮರಣವನು ತಹನು

|| ದೃಶ್ಯ ೨ ||

**ಸತ್ಯವಾನ್ :**

ನೋಡಲ್ಲಿ ಪ್ರಿಯತಮೆಯೆ,
ಕುಸುಮ ಮಂದಾರ !
ಕೊಯ್ದುದದನು ಮುಡಿಯೆ ನೀ
ಬನವೇ ಸಿಂಗಾರ ! (ಕೊಯ್ದು ಮುಡಿಸುವನು)
ಏಕೆ ಕಾತರ, ಏನಿದೀ ತೆರ,
ಮನದಲೇನೋ ಆತುರ ?
ಏನು ತಾಪವು, ಏನು ಲೋಪವು,
ಮುಸುಳಿಹುದು ಮುಖದೀಪವು ?
ಏಕೆ ಸುರಿವುದು ನೀರು ಕಣ್ಣಿನಲಿ ನೀರೆ ?

**ಸಾವಿತ್ರಿ :**

ನೀರೆ, ಸುಮರಜ ತರಿಸಿತಕ್ಷಿಯಲಿ ನೀರ !

**ಸತ್ಯವಾನ್ :**

ಗರಿಬಿಡಿಸಿ ನವಿಲು ನಲಿಯುವ ಬೆಡಗ ನೋಡಲ್ಲಿ-
ಕೇಳದೋ ಕೋಗಿಲೆಯ ಕುಕಿಲು !

**ಸಾವಿತ್ರಿ :** (ಸ್ವಗತ)

ಹೇಗೆ ತಣಿಸಲಿ ನನ್ನ ಎದೆಗುದಿಯ? ಪ್ರಿಯತಮಗೆ
ತಿಳಿಯದಿರಲೆನ್ನ ಈ ದಿಗಿಲು [ನಿಲ್ಲುವಳು]

**ಸತ್ಯವಾನ್ :**

ನಿಂದೆಯೇತಕೆ ಹಿಂದೆ ? ಬಳಲಿಕೆಯೆ ಸಾವಿತ್ರಿ ?

**ಸಾವಿತ್ರಿ :**

ಇಲ್ಲ-ಚುಚ್ಚಿತು ಮುಳ್ಳು-

ತ್ಯವಾನ್ :

ಲ್ ನಿಲ್ಲು ! (ಮುಳ್ಳು ಕೀಳುವನು)

ಾವಿತ್ರಿ : (ಸ್ವಗತ)

ಮುಮನ ಪಾಶ ಬೀಸುತಿಹುದು
ಡೆವೆನೆಂತು ದೇವ ?
ಡುಗನಂತೆ ಹಾರಿ ಬಂದು
ಳೆಯು ತೊಯ್ವ ಜೀವ
ಾಪಾಡು ಸತಿಯ ನೆನ್ನ
ತಿಯ ದೇವ ದೇವ
ೀನಲ್ಲದಾರು ನಮ್ಮ
ಾಗ್ಯವನ್ನು ಕಾವ ?
ಮುಮನಗೆದ್ದ ಶಿವನೆ, ದೂರ
ೂಡು ಪತಿಗೆ ಸಾವ ;
ರಿಯೆ, ಹರಿಸು ಎನ್ನ ನೋವ
ೋರು ದಯಾಭಾವ !

(ಯಮುನ ಪ್ರವೇಶ)

ತ್ಯವಾನ್ :
ಾವಿತ್ರಿ !

ಾವಿತ್ರಿ :
ನಿನಿಯ ?

ತ್ಯವಾನ್ :
ಣ್ಣನಾವರಿಸುತಿದೆ
ತ್ತಲೆಯ ಉರುಳು ;
ೂರೆದಂತೆ ತೋರುತಿದೆ
ರಸದಿ ಕರುಳು !
ರಗುವೆನು ತಲೆಯಿರಿಸಿ
ನ್ನ ತೊಡೆಯಲ್ಲಿ (ಒರಗುವನು)

ಾವಿತ್ರಿ : (ಸ್ವಗತ)
ಂತೆ ? ಬಂದೆಯ ಕಾಲ,
ನಗೆ ತಡೆಯೆಲ್ಲಿ ?

ಸಾವಿತ್ರಿ : (ಯಮುನಿಗೆ)
ನೀನಾರ್ಗೆ ಬಂದೆ ? ಏಕಲ್ಲಿ ನಿಂದೆ ?
ಮುಂದೆ ಬಾ ತಂದೆ !

ಯಮ :
ಎರಗುವೆನು ಸಾಧ್ವಿಯೇ, ಸಾವಿತ್ರಿ, ನಿನ್ನಡಿಗೆ
ಯಮ ನಾನು, ಬಂದಿಹೆನು ನಿನ್ನಿನಿಯನನು
ಪಡೆಯೆ

ಸಾವಿತ್ರಿ :
ಬೇಡುವೆನು ಯಮರಾಜ, ಓ ಧರ್ಮಮೂರ್ತಿ !
ಒಡೆಯದಿರು ನೀನೆನ್ನ ಈ ಪ್ರೇಮಮೂರ್ತಿ !

ಯಮ :
ಆಗದದು ಓ ದೇವಿ, ಧರ್ಮಕಿಂಕರ ನಾನು
ವಿಶ್ವಧರ್ಮವು ಜನನ; ಮರಣವದರಲಿ ನ್ಯೂನ
ತೋರಲಾರದು; ವಿಶ್ವ ಚಕ್ರ ಧರ್ಮಕೆ ಶರಣ
ಮುಗಿಯಿತಿವನಾಯುಷ್ಯ-ಇಂದೆ ಇವನಿಗೆ ಮರಣ

ಸಾವಿತ್ರಿ :
ತೋರಲಾರೆಯಕರುಣ ? ಧರ್ಮಾವತರಣ !
ತಡೆಯಲಾರೆಯ ಮರಣ ?

ಯಮ :
ಧರ್ಮದನುಸರಣ
ಕಾರ್ಯವೆಮ್ಮದು , ಮರಣಕಿಲ್ಲ ಸಂತರಣ
ದೂರ ಸರಿ ಮಗಳೆ , ಧರ್ಮಕೆ ಚ್ಯುತಿಯ ತಾರತಿರು-
ಕೊಂಡೊಯ್ವೆನಿವನ ನಾನಿನ್ನು ನೀನಿಲ್ಲೆ ಇರು !

ಸಾವಿತ್ರಿ :
ಕೊಂಡೊಯ್ಯೊ ಯಮರಾಜ, ನಿನ್ನ ನುಡಿ ಸಾಜ
( ದೂರನಿಲ್ಲುವಳು )
[ ಯಮನು ಪಾಶವಿಕ್ಕಿ ಸತ್ಯವಾನನ ಪ್ರಾಣ ಹೀರುವನು ]

ಸಾವಿತ್ರಿ : (ಸ್ವಗತ)
ಸತಿಗೆ ಪತಿಯೇ ಸಕಲ ಧರ್ಮ
ನಡೆವೆನಾತನ ಹಿಂದಕೆ
ಆರ್ಯ ನಾರಿಯ ನೀತಿಮರ್ಮ

ತೋರ್ವೆನಿಂದಿಂ ಮುಂದಕೆ

(ಪ್ರಕಾಶ) ದೇವನೆ, ಪತಿ ಪ್ರಾಣಾವ ಹಾರಕ,
ಜೀವನ ಮರಣ ಸುಸಂಯಮನೇ,
ಧರ್ಮದೆ ನಡೆ ನೀ, ನಾನೂ ನಡೆವೆನು
ನಮೋ ನಮೋ ನಿನಗೋ ಯಮನೇ !

**ಯಮ :**

ಅನುಸರಿಸಿ ಬಹೆಯೇಕೆ, ಸಾವಿತ್ರಿ ? ಜೋಕೆ ;
ಮಕಿಣಕಿಲ್ಲವು ಕರುಣ;ನಿಲ್ಲಿಸನು ಸರಣ !

**ಸಾವಿತ್ರಿ :**

ಪತಿಯ ಹಿಂದಕೆ ನಡೆವೆ ನೆಂಬ
ಧರ್ಮ ಬದ್ಧೆಯು ನಾನು, ಧರ್ಮ !
ದು:ಖ ಸುಖಗಳನೊಡನೆ ಉಂಬ
ಧರ್ಮ ಪತ್ನಿಯು ನಾನು ಧರ್ಮ !
ಹೋಗಲೆಲ್ಲಿ ಪತಿಯು ಅಲ್ಲಿ
ಬರುವುದವನ ನೆರಳು

**ಯಮ :**

ತೆರಳು ಮಗಳೆ, ಹಟವನಿಲ್ಲಿ-
ಸಿನ್ನು ಮನೆಗೆ ಮರಳು !

**ಸಾವಿತ್ರಿ :**

ಧರ್ಮ ಮಾರ್ಗದಿನೆನ್ನ ಮರಳಿಸುವೆ ಯಮದೇವ ?

**ಯಮ :**

ಹುಚ್ಚು ಸಾಹಸ ಬೇಡ ಮಗಳೆ,
ಮೆಚ್ಚಿಕೊಡುವೆನು ವರವನೊಂದ-
ಕೇಳು, ಮನದಭಿಲಾಷೆಯೊವುದು ?
ಹೊರತು ಈತನ ಪ್ರಾಣವೊಂದ !

**ಸಾವಿತ್ರಿ :**

ಆಗಲಾಗಲಿ ಧರ್ಮರಾಜನೆ, ನನ್ನ ಮಾವನ ರಾಜ್ಯವು
ಹೋದ ಕಣ್ಗಳು ಮರಳಾತಗೆ-

**ಯಮ :**

ಅಸ್ತು; ಇದುನನಗಿಷ್ಟವು ! (ನಡೆಯುವನು)

॥ ದೃಶ್ಯ ೩ ॥

**ಸಾವಿತ್ರಿ :**

ಸತ್ಯ ನಿರಂತರ ಮೂರ್ತಿ ಪರಾತ್ಪರ
ಜೀವನ ಧರ್ಮ ನಿಯಮ ಯಮನೇ,
ಪತಿಯಸುವೊಡನೆಯೇ ನನ್ನನು ಕೊಂಡಯ್
ನಮೋ ನಮೋ ನಿನಗೋ ಯಮನೇ !

**ಯಮ :**

ಮರಳಲಿಲ್ಲಿನ್ನು ನೀ ? ಒಡನೇಕೆ ಬರುವೆ ಸತಿ ?
ಕಾಡದಿರು ಯಮನನ್ನು !

**ಸಾವಿತ್ರಿ :**

ಬೇಡುವೆನು ಯಮನನ್ನು !

**ಯಮ :**

ಬಂದಿಲ್ಲವಿಲ್ಲಿವರಮಾರುಮೀ ವರೆಗೆನ್ನ
ಬಳಿವಿಡಿದು ಕಾಡಲಾಂಾರ್ತರಿಲ್ಲ !

**ಸಾವಿತ್ರಿ :**

ಆರ್ತೆಯಾಂ ಬೇಡುವೆಂ

**ಯಮ :**

ಮೆಚ್ಚಿದೆನು ಎಲೆ ಮಗಳೆ, ನಿನ್ನ ಸಾಹಸಕಾಗಿ
ಇನ್ನೊಂದು ಕೋರಿಕೆಯ ಕೋರುವುದು ! ಪತಿಯ ಬ
ಳ್ವಿಯನುಳಿದು

**ಸಾವಿತ್ರಿ :**

ಆಗಲಾಗಲಿ ದೇವ, ಕೇಳುವೆನು ಕರುಣಿಪುದು
ನನ್ನ ಮಾವನ ರಾಜ್ಯ ಸತ್ಯವಾನ್ ಪುತ್ರರಿಗೆ
ದೊರೆಯಲಾ ಬಳಿಕಾ !

**ಯಮ :**

ತಥಾಸ್ತು ! (ಯೋಚಿಸಿ) ಓ ! ಏನೆಂದೆನೇಸಿತ್ತೆನ್ !
ಧನ್ಯೆ ನೀಂ ಸಾವಿತ್ರಿ ! ನಿನ್ನ ದೃಢತೆಯನಿಂದು
ಪಡೆದೆ ನೀಂ ನಿನ್ನಿನಿಯನಂ ಮಿಳ್ತುದವಡೆಯಿಂ !
ಸಾವನ್ನೆ ಸೋಲಿಸಿದ ಸಾವಿತ್ರಿ ನಿನಗಕ್ಕೆ
ಸತ್ಯಂ ಶಿವಂ ಸುಂದರಂ ; ನಿನ್ನ ಪಾತಿವ್ರತ್ಯ
ಕೀರ್ತಿಯಚ್ಚಳಿಯದಿರ್ಕೆಂದುಮೀ ಧರೆಯಲ್ಲಿ !

**ಸಾವಿತ್ರಿ :**

ಧನ್ಯೆಯಾಂ ಯಮರಾಜ !

**ಯಮ :** ಕಲ್ಯಾಣಮಸ್ತು ॥

# ಅಪೂರ್ವ ಜನಪದ ಕಲಾಮೇಳ.

—ಎಚ್. ಎಸ್. ಸಿದ್ದಗಂಗಪ್ಪ

> ಜನಸಾಮಾನ್ಯರ ಹೃದಯಾಂತರಾಳವೇ ಜನಪದ ಕಲೆಯ ಉಗಮಸ್ಥಾನ, ಆವಾಸ ಸ್ಥಾನ. ಹುಟ್ಟಿದ ಪರಿಸರವೇ ಅದರ ಶಾಲೆ. ಜೀವನದ ಅನುಭವವೇ ಅದರ ಗುರು.



ನವಂಬರ್ 13, 1976 ರಂದು ಬೆಂಗಳೂರಿನ ನಗರದ ನಾಗರೀಕರಿಗೆ ಸಂಸ್ಮರಣೀಯ ದಿನ. ಬಹುಶಃ ತಮ್ಮ ಜೀವಮಾನದಲ್ಲಿಯೇ ನೋಡಿರಲಿಲ್ಲದಂತಹ ವರ್ಣರಂಜಿತ ವೈವಿಧ್ಯಮಯವಾದ ಅಪೂರ್ವ ಜನಪದ ಕಲಾಮೇಳವನ್ನು ನೋಡಿ, ಮಣ್ಣಿನ ಮಕ್ಕಳ ಕಲಾ ಶ್ರೀಮಂತಿಕೆಯೆಂದು ಹೃದಯತುಂಬಿ ಹೊಗಳಿದರು.

ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಮೂರು ದಿನದ ಕಲಾ ಮಹೋತ್ಸವದ ಉದ್ಘಾಟನೆಯು ಮುಖ್ಯಮಂತ್ರಿಗಳ ಪ್ರೋತ್ಸಾಹ ಸೂಚಕ ಮಂಗಳವಾದ್ಯದೊಂದಿಗೆ ಆರಂಭವಾಯಿತು. ಜನಪದ ಸಾಹಿತ್ಯ, ಕಲೆಗಳ ಉದ್ಧಾರದ ಬಗ್ಗೆ ಸರ್ಕಾರ ಧನ ಸಹಾಯವನ್ನು ನೀಡಲು ಸದಾಸಿದ್ಧವೆಂದಾಗ ಸಭೆಯಲ್ಲಿ ಹರ್ಷೋದ್ಗಾರದ ಸುರಿಮಳೆಯಾಯಿತು. ಪರಿಷತ್ತಿನ ಅಧ್ಯಕ್ಷರು ಜನಪದ ಸಾಹಿತ್ಯ ಮತ್ತು ಕಲೆ ಜನಜೀವನದ ಸಂಸ್ಕೃತಿಯ ಪ್ರತೀಕವೆಂದು ಹೇಳುತ್ತಾ ಪರಿಷತ್ತಿನ ಯೋಜನೆಯ ರೂಪರೇಷೆಗಳನ್ನು ವಿವರಿಸುತ್ತಾ ಸ್ವಾಗತಿಸಿದರು. ಜಾನಪದ ಅಭಿವೃದ್ಧಿ ಯೋಜನೆಯ ಪ್ರಧಾನ ಸಂಚಾಲಕರಾದ ಶ್ರೀ ಗೊ. ರು. ಚನ್ನಬಸಪ್ಪನವರು ಜನಪದ ಸಾಹಿತ್ಯ ಮತ್ತು ಕಲೆಯು ಬೆಳೆದು ಬಂದ ರೀತಿ, ಅದರ ಅಳಿವು-ಉಳಿವಿನ

ಬಗ್ಗೆ ಆವರವ ಅಭಿಮಾನಿಗಳಿಗೆ ಪರಿಚಯ ಮಾಡಿಕೊಡುತ್ತಾ, ನಾಡಿನ ಮೂಲೆ ಮೂಲೆಯಿಂದ ಬಂದಿರುವ ಕಲಿಯುವ ಕಲಾವಿದರೊಂದಿಗೆ ಕಲಿತ ಕಲಾವಿದರ ಪ್ರೋತ್ಸಾಹವನ್ನು ಕೋರಿದರು ಮತ್ತು ಪ್ರತಿಯೊಂದು ಕಲಾ ಪ್ರದರ್ಶನವನ್ನೂ ವಿವರಣೆಯೊಂದಿಗೆ ಆರಂಭಿಸಿದರು.

ಹಿರಿಯೂರು ತಾಲ್ಲೂಕು ಮೇಕ್ಲೋರ ಹಳ್ಳಿಯ ತಿಮ್ಮಣ್ಣ ಸಂಗಡಿಗರು ಸುಶ್ರಾವ್ಯವಾಗಿ ಗಣಪದ ಹಾಡಿ ನಾಂದಿ ಮಾಡಿದರು. ನಂತರ ಹುತ್ತರಿ ಹಬ್ಬದ ಕುಣಿತ. ಇದು ಕೊಡಗಿನ ಹಬ್ಬಗಳಲ್ಲಿ ವಿಶೇಷ. ಕೊಡವರ ವೇಷ ಧರಿಸಿ, ಹೊಸ ಬೆಳೆ ಕೊಯ್ದಾಗ ದೇವರಿಗೆ ಪೂಜೆ ಸಲ್ಲಿಸಿ ಆಚರಿಸುವ ಕಲೆ ಇದು. ಇದನ್ನು ಹಾಡಿ ಕುಣಿದು ಸೊಗಸು ತಂದವರು ವೀರರಾಜಪೇಟೆ ತಾಲ್ಲೂಕಿನ ಹರಿಹರ ಗ್ರಾಮದ ಯುವಕ ಸಂಘದವರು.

ಬಳ್ಳಾರಿ ಜಿಲ್ಲಾ ಹೂವಿನ ಹಡಗಲಿಯ ಶ್ರಿ
ಸರಜಪ್ಪನವರ ಖಾಸಿಮಲೆ ಸಾಬಿ ಮತ್ತು ಸಂಗಡಿಗರು
ಮೊಹರಂ ಹಬ್ಬದಲ್ಲಿ ಕಾಲಿಗೆ ಗೆಜ್ಜೆ ಕಟ್ಟಿಕೊಂ
ತೋರಣ ಕೋಟಿನ ದಾರ ಹಿಡಿದುಕೊಂಡು ವಿವಿಧ ಭಂ
ಗಳಲ್ಲಿ ಕುಣಿಯುವ ರೀತಿ ಆಕರ್ಷಕವಾಗಿತ್ತು. ಸುಮಾ
8–10 ಅಡಿ ಎತ್ತರದ ಬಿದಿರಿನಿಂದ ಎಣೆದ ಬೃಹದಾಕಾ
ವಾದ ಗಂಡು ಮತ್ತು ಹೆಣ್ಣಿನ ಗೊಂಬೆಯೊಳಗೆ ಸೇ
ಕೊಂಡ ಕಲಾವಿದರು ವಾದ್ಯಗಳ ಗತ್ತಿಗೆ ಕುಣಿಯುವ ರೀ
ರಂಜನೀಯ. ಕುಣಿತವನ್ನು ತೋರಿಸಿ ಸಕ್ಕು ಸಲಿಸಿದವ
ಶಿಡ್ಲಘಟ್ಟ ತಾಲ್ಲೋಕು ಜಂಗಮ ಕೋಟೆಯ ಕೆ. ಎ
ನಾರಾಯಣಸ್ವಾಮಿ ಸಂಗಡಿಗರು.

ಲೌಕಿಕ ವೃತ್ತಿ ಗಾಯನ ಹಾಗೂ ನೃತ್ಯಗ
ಒಂದು ರಂಜನೀಯ ಕಲೆ ಕರಪಾಲ. ಇದರಲ್ಲಿ ಒಬ



ಯಕ್ಷಗಾನ ಬಯಲಾಟ.

ನಾಯಕ ಇಬ್ಬರು ಶಿಷ್ಯರಿರುತ್ತಾರೆ. ಕೈಯಲ್ಲಿ ತಾಳ ಹಿಡಿದು ಕಲಾವಿದರು ಜೊತೆಗೂಡಿ ಕುಣಿಯುತ್ತಾರೆ. ಇದನ್ನು ನಡೆಸಿಕೊಟ್ಟವರು ತಿಪಟೂರು ತಾಲ್ಲೂಕು ಕೊನೆಹಳ್ಳಿಯ ಕರಪಾಲ ಸಿದ್ಧಯ್ಯ ಸಂಗಡಿಗರು. ನಂತ ಶಹಪೂರ ತಾಲ್ಲೂಕು ಅಣಬಿ ಗ್ರಾಮದ ಚಂದಪ್ಪ ಮರೆಪ್ಪ ತಳಗೇರಿ ಸಂಗಡಿಗರು ಹಲಗೆ ಬಡಿತದ ಕೈಚಳಕ ತೋರಿಸಿದರೆ, ರಾಮನಗರ ತಾಲ್ಲೂಕು ಡಣಾಯಕನಪುರದ ಡಿ. ಪುಟ್ಟಸ್ವಾಮಿ ಸಂಗಡಿಗರು ಸುಮಾರು 15 ರಿಂದ 20 ಅಡಿ ಉದ್ದವಿರುವ ಬಣ್ಣ ಬಣ್ಣದ ಪಟಗಳನ್ನು ಕುಣಿಸಿ ರಂಜಿಸಿದರು. ಬಣ್ಣದ ಅಂಗಿ ಮೊಳಕಾಲಿನವರೆಗೆ ಏರು ಗಟ್ಟಿದ ಪಂಚೆ, ಸೊಂಟಕ್ಕೆ ಬಣ್ಣದ ವಸ್ತ್ರ, ತಲೆಗೆ ರೂಮಾಲು, ಬಲಗಾಲಿಗೆ ಗೆಜ್ಜೆ, ಬಲಗೈಲಿ ಕೋಲು, ಎಡಗೈಲಿ ಬಣ್ಣದ ಕರವಸ್ತ್ರದ ವೇಷ ಭೂಷಣದ ವಿವಿಧ ಹೆಜ್ಜೆ ಕುಣಿತವನ್ನು ತೋರಿಸಿದವರು ಧಾರವಾಡ ಜಿಲ್ಲೆಯ ಪಸುಪತಿ ಹಾಳದ ಪರಪ್ಪ ನೀಲಪ್ಪ ಡೊಳ್ಳಿನ ಸಂಗಡಿಗರು.

ಜಾತ್ರೆಯಲ್ಲಿ ತಾಯಿ ಎಲ್ಲಮ್ಮನ ಗುಣವರ್ಣನೆ ಚೌಡಿಕೆ ಮೇಳದಲ್ಲಿ ಪ್ರಧಾನ. ಚೌಡಿಕೆ ಹಿಡಿದು ಸುಶ್ರಾವ್ಯವಾಗಿ ಹಾಡುತ್ತಾ ಪ್ರೇಕ್ಷಕರ ಹೃನ್ಮನಸ್ಸನ್ನು ಸೆರೆಹಿಡಿದವರು ಚಿತ್ರದುರ್ಗ ಜಿಲ್ಲೆಯ ಬೆಟ್ಟದ ನಾಗೇನ ಹಳ್ಳಿಯ ದುರ್ಗಪ್ಪ ಸಂಗಡಿಗರಾದರೆ, ಒಂದೊಂದು ಕೊಡ ಹಿಡಿದು ನಾಯಕನ ಕೊಳಲಿನ ಗತ್ತಿಗನುಗುಣವಾಗಿ ಕೋಲಾಟ ದುತ್ತ ಕುಣಿದವರು ಬೆಳಗಾಂ ಜಿಲ್ಲೆಯ ಮುತಗ ಗ್ರಾಮದ ಅಪ್ಪಣ್ಣ ಭರಮಣ್ಣ ಸಂಗಡಿಗರು - ಬೋವಿ ಜನಾಂಗದ ದುಮ್ಮಾಲಿ ಕುಣಿತ ಬಡಿತಕ್ಕೆ ತಕ್ಕ ಕುಣಿತ, ಇದರ ಕೈ ಚಳಕ ತೋರಿಸಿದವರು ಆಳಂದ ತಾಲ್ಲೂಕ್ ಮಾದನ ಹಿಪ್ಪರಿಗೆಯ ಚೌಡಪ್ಪ ಸಂಗಡಿಗರು. ನಂತರ ದೇವದುರ್ಗ ತಾಲ್ಲೂಕ್ ಬಂಡೇ ಗುಡ್ಡದ ಕಲಾವಿದರ, ಬಣ್ಣ ಬಣ್ಣದ ಲಂಬಾಣಿಮಹಿಳೆಯರ ಉಡುಗೆ ತೊಡುಗೆಗಳನ್ನು ಧರಿಸಿ ಕುಣಿದ ಕುಣಿತ ಮನ ಮೋಹಕ ಹಾಗೂ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿತ್ತು.

ಕರಡೆ, ಓಲಗ, ಡೋಣು-ತಾಳೆ, ಮೌರಿ' ಶೃತಿ ಮುಖವೀಣೆಗಳಿಂದ ಯಕ್ಷಗಾನ ಧಾಟಿಯ ಹಾಡುಗಳನ್ನು ಬಾರಿಸುತ್ತಾ ಕುಣಿಯುತ್ತಾ ಆಹ್ಲಾದವನ್ನುಂಟುಮಾಡಿದವರು ಅರಸೀಕೆರೆ ತಾಲ್ಲೂಕ್ ಹಾರನ ಹಳ್ಳಿಯ ಚಲುವಯ್ಯ ಸಂಗಡಿಗರಾದರೆ' ತಾಳಮದ್ದಳೆ ಕಾರ್ಯ ಕ್ರಮ ನಡೆಸಿದವರು ಉತ್ತರ ಕನ್ನಡ ಜಿಲ್ಲೆಯ ಲಿ . ಟಿ . ಹೆಗಡೆ ಸಂಗಡಿಗರು, ನಂತರ ದ. ಕನ್ನಡ ಜಿಲ್ಲೆಯ ಕೋಟದ ಶ್ರೀ ಪಿ. ಶ್ರೀಧರ ಹಂಡೆ ಮಿತ್ರರು ಯಕ್ಷಗಾನ ಶೈಲಿಯಿಂದ ಮೊದಲದಿನದ ಕಾರ್ಯ ಕ್ರಮಕ್ಕೆ ಮಂಗಳ ಹಾಡಿದರು.

ಎರಡನೆಯ ದಿನದ ಕಾರ್ಯಕ್ರಮವು ಸಾಂಪ್ರದಾಯಿಕವಾಗಿ ಪ್ರಾರಂಭವಾಯಿತು. ವಿಚಾರ ಗೋಷ್ಠಿಯನಂತರ ಜನಪದ ಸಾಹಿತ್ಯ ಮತ್ತು ಕಲೆಯಬಗ್ಗೆ ಇರುವ ಕುಂದು ಕೊರತೆಯನ್ನು ಕೆಲವು ಗಣ್ಯರು ಸಭೆಗೆ ವಿನಂತಿಸಿಕೊಂಡರು. ಕಲೆಯ ಉಳಿವಿನ ಬಗ್ಗೆ ಚರ್ಚಿಸಿ, ಎಲ್ಲಿಯೋ ಇದ್ದ ಕಲಾವಿದರನ್ನು ಹುಡುಕಿ ಸನ್ಮಾನಿಸಿದ್ದಕ್ಕೆ ಪರಿಷತ್ತಿಗೆ ಕೃತಜ್ಞತೆಯನ್ನರ್ಪಿಸಿದರು.



ಮುಗಿಲು ಮುಟ್ಟುವ ನಂದಿಧ್ವಜ.

ಸಂಜೆ 6 ಗಂಟೆಗೆ ಎರಡನೆಯ ದಿನದ ಕಲಾ ಪ್ರದರ್ಶನ ಹರಳೂರು ಶ್ರೀ ವೀರಭದ್ರಸ್ವಾಮಿ ಸೇವಾ ಸಮಿತಿಯ ಎಚ್. ರುದ್ರಯ್ಯ ಸಂಗಡಿಗರಿಂದ ನಂದೀ ಧ್ವಜ ಕುಣಿತದೊಂದಿಗೆ ಪ್ರಾರಂಭವಾಯಿತು. ಹರಿಯಪ್ಪನ ಹಳ್ಳಿಯ ಎಪ್ಪತ್ತಾರರಯುವಕ ಪಟೇಲ್ ಸಿದ್ದರಾಮಯ್ಯನವರು ಸುಮಾರು 26 ಅಡಿ ಉದ್ದವಿರುವ ಮತ್ತಾರುಮಣ ಭಾರವಿರುವ ಎರಡು ಧ್ವಜಗಳನ್ನು ಲೀಲಾಜಾಲವಾಗಿ ಕುಣಿಸಿ ಬೆರಗುಗೊಳಿಸಿದರು. ನಂತರ ನಂದೀ ಧ್ವಜ

ಕುಣಿತದೊಂದಿಗೆ ತುಮಕೂರಿನ ಹೆಚ್. ಎಸ್. ನೀಲಕಂಠಯ್ಯನವರ ವೀರಭದ್ರನ ಕುಣಿತ ರಂಜನೀಯವಾಗಿತ್ತು



**ಕೋಲು ಕೋಲನ್ನ ಕೋಲೆ..................**

ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಕೋಲು ಹಿಡಿದು ಕೋಲಿನ ಕಣಲಿಗೆ ಕಾಲಿನ ತಾಳ ಹಾಕುತ್ತಾ ಸ್ವರವೆತ್ತಿ ಹಾಡುತ್ತ ಬಂದು ಹತ್ತಾರು ಬಗೆಯ ಕೋಲಾಟ ತೋರಿಸಿದವರು ಕಡೂರು ತಾಲ್ಲೂಕು ಬ್ಯಾಗಡೆ ಶ್ರೀರಾಮಾಂಜನೇಯ ಯುವಕ ರೈತಸಂಘದವರು ಕೈಯಲ್ಲಿ ದೀಪ ಹಿಡಿದು ಹಾಡುತ್ತಾ ಬಂದು ಅಂಟಿಕೆ-ಪಂಟಿಕೆ ಕಾರ್ಯಕ್ರಮವನ್ನು ನಡೆಸಿಕೊಟ್ಟವರು ಶಿವಮೊಗ್ಗ ಜಿಲ್ಲಾ ಹೆಗ್ಗೋಡಿನ ಶ್ರೀ ನೀಲಕಂಠೇಶ್ವರ ನಾಟ್ಯ ಸೇವಾ ಸಂಘದವರು. ಸಿಂಧನೂರು ತಾಲ್ಲೂಕು ದಿದ್ದಿಗಿಯ ಬಡೆಸಾಬ್ ಸಂಗಡಿಗರಿಂದ ಹೆಜ್ಜೆ ಮೇಳದ ಕಾರ್ಯಕ್ರಮ ನಡೆಯಿತು.

ಹಳದಿ ಸಮವಸ್ತ್ರ, ಸೊಂಟಕ್ಕೆ ಬಣ್ಣದ ಬಟ್ಟೆ ಮುಡಿಕಟ್ಟಿದ ಜಡೆ, ಕಾಲಿಗೆ ಗೆಜ್ಜೆ, ಕೈಯಲ್ಲಿ ಧ್ವಜ ಹಿಡಿದು ಗುರು ಹೇಳಿ ಕೊಟ್ಟಿದ್ದನ್ನು ಭಕ್ತಿಯಿಂದ ಹಾಡುತ್ತ ವಿವಿಧ ಭಂಗಿಗಳಲ್ಲಿ ವೃತ್ತಾಕಾರವಾಗಿ ತಿರುಗುತ್ತ ಪಂಡರಿ ಭಜನೆ ಮಾಡಿ ಭಕ್ತಿವಾತಾವರಣವನ್ನು ಮೂಡಿಸಿದವರು ಅರಸೀಕೆರೆ ತಾಲ್ಲೂಕು ಶಂಕರನಹಳ್ಳಿಯ ಕೆ. ಮೈಲಾರಪ್ಪ ಸಂಗಡಿಗರು.

ಗೊರವರು ಮೈಲಾರಲಿಂಗನ ಭಕ್ತರು. ಕರಿ ಕಂಬಳಿ ನಿಲುವಂಗಿ, ತಲೆಗೆ ಕರಡಿ ಕೂದಲಿನ ಟೊಪ್ಪಿಗೆ,



**ಅಂಟಿಕೆ—ಪಂಟಿಕೆ.**

ಒಂದು ಕೈಯಲ್ಲಿ ಡಮರುಗ, ಒಂದು ಕೈಯಲ್ಲಿ ಪಿಳ್ಳಂಗೋವಿ, ಕೊರಳಲ್ಲಿ ಕವಡೆಸರ, ಚರ್ಮದ ಜೋಳಿಗೆ, ಹಣೆಗೆ ಮೈಲಾರಲಿಂಗನ ಭಂಡಾರದ ಮುದ್ರೆ ಈ ಭೂಷಣದಿಂದ ಡಮರುಗದ ಗತ್ತಿಗೆ ಸುತ್ತುಗಟ್ಟಿಕೊಂಡು ಮೈಲಾರಲಿಂಗನನ್ನು ನೆನೆದು ಹಾಡಿ ರಂಜಿಸಿದವರು ಚನ್ನಪಟ್ಟಣ ತಾಲ್ಲೂಕು ಕರಿಯಪ್ಪನ ದೊಡ್ಡಿಯ ಕೆಂಚಮಲ್ಲಯ್ಯ

ಸಂಗಡಿಗರಾದರೆ, ವೀರಾವೇಶದಿಂದ ಶಸ್ತ್ರಪವಾಡ ತೋರಿದ ಪುರವಂತಿಕೆ ಕಲಾ ಪ್ರದರ್ಶನವು ಯಾದಗಿರಿ ತಾಲ್ಲೋಕಿನ ಚಂಡರಿಕೆಯ ಸಿದ್ಧಲಿಂಗಪ್ಪ ಸಂಗಡಿಗರದು.

ಪ್ರತಿಯೊಂದು ಕಲಾ ಪ್ರದರ್ಶನದ ನಡುವೆ ಪ್ರೇಕ್ಷಕರ ಹರ್ಷೋದ್ಗಾರ, ಮಂತ್ರಿವರ್ಯರ ಹೃದಯ ತುಂಬಿದ ಅಭಿಮಾನ, ಹಳ್ಳಿಯ ಮಕ್ಕಳಿಗೆ ಸಂದ ಸನ್ಮಾನ ನಿಜಕ್ಕೂ ಪ್ರಶಂಸಾರ್ಹವಾಗಿತ್ತು.

ಜಾತ್ರೆಗೆ ಬಂದ ಜನರನ್ನು ರಂಜಿಸುವುದು ಹಳ್ಳಿಗರಿಗೆ ಬಲು ಹಿಗ್ಗು. ಕುಣಿತಕ್ಕೆ ತಮಟೆ ವಾದ್ಯವೇ ಮೇಳ, ಇದರಲ್ಲಿ ಬೆಸ ಸಂಖ್ಯೆಯ ಗತ್ತುಗಳಿವೆ ಇದನ್ನು ಕುಣಿದು ತೋರಿಸಿದವರು ನಾಗಮಂಗಲ ತಾಲ್ಲೂಕು ಚಾಕೇನಹಳ್ಳಿಯ ಎನ್. ಗೌಡಯ್ಯ ಸಂಗಡಿಗರು. ಉತ್ತರ ಕರ್ನಾಟಕದ ಮಹತ್ವದ ಕಲೆ "ಕರಡಿ ಮಜಲು" ಕರಡಿ, ದಿಮ್ಮು, ಚವುಗಡ, ತಾಳ, ಸಾಜ, ಶೃತಿಗಳ ಸಮ್ಮಿಳನ ಅದು. ಉತ್ಸವಾದಿಗಳಲ್ಲಿ ಇದ ಮಂಗಳವಾದ್ಯ ಈ ಸೊಬಗನ್ನು ತೋರಿಸಿದವರು ಜಮಖಂಡಿ ತಾಲ್ಲೂಕು ಮಹಲಿಂಗಪುರದ ವೀರಭದ್ರಪ್ಪ ಸಂಗಡಿಗರು. ನಂತರ ತಿಪಟೂರು ತಾಲ್ಲೂಕು ಕೊನೇಹಳ್ಳಿಯ ಕೆ. ಟಿ. ರಂಗಪ್ಪ ಸಂಗಡಿಗರು ಸೋಮನ ಕುಣಿತ ತೋರಿಸಿದರೆ, "ಗುಂಡೂ ಭರಮನ" ಆಟವನ್ನು ತೋರಿಸಿದವರು ಕುಮಟಾ ತಾಲ್ಲೂಕು ಹಟ್ಟಿಕೇರಿಯ ಹುಲಿಯಪ್ಪ ಸಂಗಡಿಗರು.

ಆಧುನಿಕ ಚಲನ ಚಿತ್ರಕ್ಕೆ ಸ್ಫೂರ್ತಿ ಕೊಟ್ಟ ಕಲೆ ತೊಗಲು ಬೊಂಬೆಯಾಟ. ಘಾಟಿ ಯಕ್ಷಗಾನ ಬಯಲಾಟ. ಕತ್ತಲು ಬೆಳಕಿನಲ್ಲಿ ಕೈಚಳಕದಿಂದ ಕುಣಿಸುವ ಕಲೆ. ಇದರಿಂದ ಊರಿಗೆ ತಗುಲಿದ ರೋಗ ಬಿಡುಗಡೆ ಎಂಬುದು ಹಳ್ಳಿಗರ ನಂಬಿಕೆ. ಇದರ ಕಥಾ ವಿಷಯ ಪೌರಾಣಿಕದ್ದು. ಈ ರಂಜನೀಯ ಆಕರ್ಷಕ ಕುಣಿತವನ್ನು ತೋರಿಸಿದವರು ಪಾವಗಡ ತಾಲ್ಲೂಕು ಅರೆಕ್ಯಾತನಹಳ್ಳಿಯ ಹನುಮಂತರಾಯಪ್ಪ ಸಂಗಡಿಗರು.



ಉಮ್ಮತ್ತಾಟ್

ಕೊಡಗಿನ ಬೆಡಗಿನ ಕಲೆ ಉಮ್ಮತ್ತಾಟ್. ಸ್ತ್ರೀಯರೇ ಭಾಗವಹಿಸುವ ಈ ಕಲೆ ಷಷ್ಠಿ, ದೀಪಾವಳಿ, ಸಂಕ್ರಾಂತಿ, ಉಗಾದಿ ಹಬ್ಬಗಳು. ಉಮ್ಮತ್ತಾಟ್ ಉಮಾದೇವಿಯ ನೃತ್ಯವೆಂಬ ಭಾವನೆ. ಸಮುದ್ರ ಮಂಥನದ ಕಾಲದ ಅಮೃತ ಹಂಚುವಿಕೆಯ ಸಂಕೇತ ವೆಂದು ನಂಬಿಕೆ. ಕೊಡಗಿನ ಉಡುಪು "ಕುತ್ತುದೀಪ

ತೇಯ ತಕ್ಕೆ ಜೋಳಕು ಮಡಗಿ” ಕೈಯಲ್ಲಿ ಕಂಚಿನ ತಾಳ ಹಿಡಿದು ವಿವಿಧ ಭಂಗಿಗಳಲ್ಲಿ ಹಾಡಿ ಕುಣಿದ ಕಲಾವಿದೆಯರು ವೀರರಾಜಪೇಟೆ ತಾಲ್ಲೂಕು ಜೆಂಬೆ ಬೆಳ್ಳೂರು ಮಹಿಳಾ ಸಮಾಜದವರು.



**ಸುಗ್ಗಿಯ ಹಿಗ್ಗು**

ನಮ್ಮ ಹಳ್ಳಿಗರಿಗೆ ಸುಗ್ಗಿ ಹಿಗ್ಗಿನ ಕಾಲ. ಹಿಡಿಕಾಳು ರಾಶಿಕಂಡಾಗ ಹಿಗ್ಗಿ ಕುಣಿಯುತ್ತಾರೆ. ರಂಗುರಂಗಿನ ಉಡುಪು ಧರಿಸಿ, ಕಾಲಿಗೆ ಗೆಜ್ಜೆ, ಕೈಯಲ್ಲಿ ನವಿಲುಗರಿ ಕುಚ್ಚು ಹಿಡಿದು ಗುಮಟ್ಟೆ ಮತ್ತು ಜಾಗಟೆಯ ಧ್ವನಿಗೆ ತಕ್ಕಂತೆ ಕುಣಿದು ಜನಮನ ಸೆಳೆದ ರಸಿಕರು ಕುಮಟಾ ತಾಲ್ಲೂಕು ಅಘನಾಶಿನಿಯ ಗೋವಿಂದಪ್ಪ ಸಂಗಡಿಗರು. ತಿಪಟೂರು ತಾಲ್ಲೂಕು ಕೊನೆಹಳ್ಳಿಯ ಪಟೇಲ್ ನಾರಸಪ್ಪ ಸಂಗಡಿಗರು “ಹಿಡಿಂಬಾಸುರ ವಧೆ” ಎಂಬ ಬಯಲಾಟದಿಂದ ಎರಡನೆಯ ದಿನದ ಕಾರ್ಯಕ್ರಮ ಮುಕ್ತಾಯವಾಯಿತು.

ಮೂರನೆಯ ದಿನದ ಕಾರ್ಯಕ್ರಮ ಗೀತ ಗೋಷ್ಠಿ. ಅನೇಕ ವಿದ್ವಾಂಸರ ಭಾಷಣದ ನಂತರ ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಕಲಾಮೇಳ ಮತ್ತು ಅದರ ಹಲವು ಯೋಜನೆಯ ಬಗ್ಗೆ ಸಚಿವರು ಅಭಿನಂದಿಸಿ ಜನಪದ ಸಾಹಿತ್ಯ ಮತ್ತು ಕಲೆಯ ಅಳಿವು ಉಳಿವಿನ ಬಗ್ಗೆ ಸಹಕರಿಸಬೇಕೆಂದು ಕಲಾಭಿಮಾನಿಗಳಿಗೆ ಕರೆ ನೀಡಿ ಪ್ರೋತ್ಸಾಹಿಸುತ್ತಾ ಪ್ರಶಸ್ತಿ ಪತ್ರಗಳನ್ನು ವಿತರಣೆ ಮಾಡಿದರು.

ಮುಕ್ತಾಯ ದಿನದ ಕಲಾ ಪ್ರದರ್ಶನವನ್ನು ಗೀ ಗೀ ಪದದೊಂದಿಗೆ ಪ್ರಾರಂಭಿಸಿದವರು ಬೈಲಹೊಂಗಲ ತಾಲ್ಲೂಕು ತಿಗಡೊಳ್ಳಿಯ ಬಿಸ್ಟಪ್ಪ ಸಂಗಡಿಗರು. ನಮ್ಮ ಹಳ್ಳಿಗರು ಮೂಕ ದುಡಿಮೆಯ ನಿಸ್ತೇಜ ಜೀವಿಗಳಲ್ಲ. ಬೇಸರಿಕೆಯನ್ನು ನೀಗಿಸಿಕೊಳ್ಳುವ ಕಲಾ ಸಂಸ್ಕಾರಿಗಳು. ಅಂತಹ ಕಲೆ “ಮಲಕಿನ ಕೋಲು” ಕಲಾತ್ಮಕವಾಗಿ ಹತ್ತಾರು ಬಗೆಗಳಲ್ಲಿ ಹಗ್ಗವನ್ನು ಹೆಣೆದು ಬೆರಗುಗೊಳಿಸಿದವರು ಹರಪನಹಳ್ಳಿ ತಾಲ್ಲೂಕು ಮೂಡಲಗೇರಿಯ ಜಿ. ಹಾಲಪ್ಪ ಸಂಗಡಿಗರು.

ಒಂದೊಂದು ಸಂಪ್ರದಾಯಕ್ಕೆ ಒಂದೊಂದು ಕಲೆ. ವೈಷ್ಣವ ಸಂಪ್ರದಾಯಕ್ಕೆ ಸೇರಿದ ಕಲೆ ಭಾಗವತಿಕೆ ಮೇಳ. ಇದೊಂದು ಧರ್ಮಪ್ರಚಾರದಂತಿದೆ. ಹಾಡುಗಳು ಸಾಮಾನ್ಯವಾಗಿ ರಾಮಾಯಣ, ಭಾರತ, ಭಾಗವತಗಳಿಗೆ ಸಂಬಂಧಿಸಿದವು. ಇದೊಂದು ದೈವೀ ಆರಾಧನಾ ಕಲೆ. ತಾಳವೇ ಪ್ರಧಾನ ವಾದ್ಯ. ತಾಳದ ಗತ್ತಿಗೆ ಸರಿಯಾಗಿ ‘ಕೋಡಂಗಿ’ ವೇಷಧಾರಿ ಕುಣಿಯುತ್ತಾನೆ. ಇದನ್ನು ಹಾಡಿ ರಂಜಿಸಿದವರು ಚನ್ನರಾಯ ಪಟ್ಟಣ ತಾಲ್ಲೋಕ್ ಜಿನ್ನೇನ ಹಳ್ಳಿಯ

ಅಪ್ಪಾಜಿಗೌಡ ಸಂಗಡಿಗರು.

ಮಹದೇಶ್ವರನ ಪರಮಭಕ್ತರು ದೇವರ ಗುಡ್ಡರು. ಸ್ವಾಮಿಯ ಆರಾಧನೆಗಾಗಿ ಕಂಚಿನ ಅಥವಾ ಹಿತ್ತಾಳೆಯ ತಾಳದೊಂದಿಗೆ ಹಾಡುವುದೇ ಕಂಸಾಳೆ, ಬೀಳು ತಾಳದೊಂದಿಗೆ ಕುಣಿಯುವುದೇ ಬೀಳು ಕಂಸಾಳೆ. ಮಹದೇಶ್ವರನ ಮಹಿಮೆಯ ವರ್ಣನೆಯೇ ಈ ಗೀತೆಗಳಲ್ಲಿ ಪ್ರಧಾನ. ಈ ಹಾಡಿನ ರಾಗ- ಲಯ, ಸಾಹಿತ್ಯ ಬಲು ಸ್ವಾರಸ್ಯ ಪೂರ್ಣ. ಗೊಂಡೆ, ಗಗ್ಗರವಿರುವ ಕಂಸಾಳೆ ಹಿಡಿದು ಮಾಡುವ ಬೀಸುಕಂಸಾಳೆ ಕುಣಿತ ನಿಜಕ್ಕೂ ರೋಮಾಂಚಕಾರಿ. ಈ ಕಾರ್ಯಕ್ರಮವನ್ನು ನಡೆಸಿ ಕೊಟ್ಟವರು ಕೊಳ್ಳೆಗಾಲ ತಾಲ್ಲೋಕ್ ಮಧುವನಹಳ್ಳಿಯ ಗುರುಸಿದ್ದಪ್ಪಶೆಟ್ಟರು ಸಂಗಡಿಗರು.

ನಮ್ಮ ಹಳ್ಳಿಗರದು ಪುಸ್ತಕದ ಪಾಕಶಾಸ್ತ್ರ ಕಲೆಯಲ್ಲ. ಮಸ್ತಕದ ಸೃಜನಾತ್ಮಕ ಕಲೆ ಅಂತಹದೇ 'ಬುರ್ರ' ಕಥಾ. ಆಂಧ್ರದ ಜನಪ್ರಿಯ ಕಲೆ ಇದು. ಪ್ರಧಾನ ಕತೆಗಾರನಜೊತೆಗೆ ಇಬ್ಬರು ಮೇಳದವರಿರುತ್ತಾರೆ ಬುರ್ರ ಮದ್ದಳೆಯ ರೀತಿಯ ಒಂದು ವಾದ್ಯ. ಕತೆಗಾರನ ದಾಟಿಗೆ ಬುರ್ರ ಬಾರಿಸುತ್ತಾರೆ. ಈ ಸ್ವಾರಸ್ಯಪೂರ್ಣ ಕಾರ್ಯಕ್ರಮವನ್ನು ನಡೆಸಿಕೊಟ್ಟವರು ಗುಡಿಬಂಡೆ ತಾಲ್ಲೂಕು ಸೋಮನಹಳ್ಳಿಯ ನರಸಪ್ಪ ಸಂಗಡಿಗರು.

ವೀರಗಾಸೆ ವೀರಶೈವ ಸಂಪ್ರದಾಯದ ಮಹತ್ವಪೂರ್ಣಕಲೆ. ಸಂಪ್ರದಾಯದ ವಿರುದ್ಧ ಪ್ರಗತಿಶೀಲ ವಿಚಾರಧಾರೆ. ಯಜ್ಞಯಾಗಾದಿಗಳ ಅಂಧಶ್ರದ್ಧೆಯನ್ನು ಖಂಡಿಸಿ ಬಂಡೆದ್ದ ವೀರಭದ್ರನ ವಿಜಯದ ವಿಜೃಂಭಣೆಯೇ ಇದರ ಹಿನ್ನೆಲೆ. ಕಾವಿಕಂಗಿ, ಬಿಳಿಯ ಕಾಸೆ ಸಂಚಿ ತಲೆಗೆ ಬಿಗಿದ ರುಮಾಲು, ಕೊರಳಲ್ಲಿ ರುದ್ರಾಕ್ಷಿ, ಹಣೆಗೆ ವಿಭೂತಿ, ಸೊಂಟಕ್ಕೆ ವೀರಭದ್ರನ ಮುದ್ರೆ, ಕಾಲಿಗೆ ಗೆಜ್ಜೆ, ಇವಿಷ್ಟು ಇವರ ವೇಷಭೂಷಣಗಳುವಾದ್ಯಗಳ ಮೇಳಕ್ಕೆ ಕುಣಿದು ಬೆರಗುಗೊಳಿಸಿದವರು ತರೀಕೆರೆ ತಾಲ್ಲೂಕ್ ಗೌರಾಪುರದ ಬಸವೇಶ್ವರ ವೀರಗಾಸೆ ಮಂಡಳಿಯವರು.

ಇದ್ದಕ್ಕಿದ್ದಂತೆ ದೀಪಗಳು ಆರಿದಾಗ ಪ್ರೇಕ್ಷರಿಗೆ ದಿಗ್ಭ್ರಮೆ, ಕಾತುರ. ಕೈಯಲ್ಲಿ ಕಬ್ಬಿಣದ ಸರಳಿನಿಂದ ಮಾಡಿದ ತ್ರಿಶೂಲಾಕಾರದ ಪಂಜಿನ ಕೋಲನ್ನು ಹಿಡಿದು ಅದರ ತುದಿಗಳಿಗೆ ಎಣ್ಣೆಬಟ್ಟೆ ಸುತ್ತಿ ಬೆಂಕಿಹಚ್ಚಿ ತಮಟೆ ವಾದ್ಯದ ಗತ್ತಿಗೆ ರೋಮಾಂಚಕಾರಿಯಾಗಿ ಕುಣಿದವರು ನಾಗಮಂಗಲ ತಾಲ್ಲೂಕ್ ಹೂವಿನಹಳ್ಳಿಯ ಶ್ರೀ ಲಿಂಗೇಗೌಡ ಸಂಗಡಿಗರಾದರೆ, ಡೊಳ್ಳು ಕುಣಿತವನ್ನು ಪ್ರದರ್ಶಿಸಿದವರು ಬೀರೇದೇವರ ಪರಮಭಕ್ತರಾದ ಹಗರಿ ಬೊಮ್ಮನಹಳ್ಳಿ ತಾಲ್ಲೂಕ್ ಸೊನ್ನದ ಹಮ್ಮಿಗಿ ವೀರಪ್ಪ ಸಂಗಡಿಗರು. ನಂತರ ಆನೇಕಲ್ ತಾಲ್ಲೂಕ್ ಸಮಂದೂರು ಕೆಂಪಣ್ಣ ಸಂಗಡಿಗರಿಂದ ಕರಗದ ಕುಣಿತ ನಡೆಯಿತು. ಸೂತ್ರದ ಗೊಂಬೆಯಾಟದ ರಸದೌತಣವನ್ನು ರಾಣಿಬೆನ್ನೂರು ತಾಲ್ಲೂಕಿನ ಅಂತರವಳ್ಳಿಯ ಭಾಗವತ ನಾರಾಯಣಪ್ಪ ಸಂಗಡಿಗರೂ ಉತ್ತರ ಕರ್ನಾಟಕದ ಒಂದು ಜನಪ್ರಿಯ ನಾಟಕ ಪ್ರಾಕಾರ 'ಸಂಗ್ಯಾ-ಬಾಳ್ಯಾ' ವನ್ನು ಅಭಿನಯಿಸಿದವರು ಗೋಕಾಕ್ ಮಿಲ್ಸ್‌ನ ಬಿ. ಪಿ. ಕಬಾಡಗಿ ಸಂಗಡಿಗರು. ಕೊನೆಯಲ್ಲಿ ಇಂಡಿ ತಾಲ್ಲೂಕ್ ಸಾಲೋಟಗಿಯ ವಿಠೋಬಾಕಲ್ಲಪ್ಪಮರಡಿ ಸಂಗಡಿಗರಿಂದ "ಕೃಷ್ಣ ಪಾರಿಜಾತ" ನಾಟಕದೊಂದಿಗೆ ಕಲಾಪ್ರದರ್ಶನ ಮುಕ್ತಾಯವಾಯಿತು.

(ಪಡಿಯಚ್ಚುಗಳು : ಕನ್ನಡ ಸಾಹಿತ್ಯ ಪರಿಷತ್ತಿನ ಕೃಪೆ)

# ಅಪೂರ್ವ ಸಪ್ತ ಮಾತೃಕಾರಾಧನೆ

—ಡಾ॥ ವಿ. ಗುರುರಾಜಭಟ್

ದಕ್ಷಿಣ ಕನ್ನಡದಮಂಗಳೂರು ತಾಲ್ಲೂಕಿಗೆ ಸೇರಿದ ಪ್ರಕೃತಿ ಸೌಂದರ್ಯಕ್ಕೆ ಖ್ಯಾತಿವೆತ್ತಸ್ಥಳ ಉಳ್ಳಾಳದ ಸೋಮೇಶ್ವರ. ಈ ಸ್ಥಳದಲ್ಲಿ ಒಂದು ಪ್ರಾಚೀನ ಈಶ್ವರ ದೇವಾಲಯವಿದೆ. ದೇವಾಲಯವು ಎತ್ತರದ ದಿಬ್ಬದ ಮೇಲೆ ನಿರ್ಮಿತವಾಗಿದ್ದು, ಇದರ ಪಶ್ಚಿಮ ಭಾಗವು ಅರಬ್ಬೀ ಸಮುದ್ರದ ತೆರೆಗಳ ಹೊಡೆತಕ್ಕೆ ಒಳಗಾಗಿರುವ ಪ್ರಾಕೃತಿಕ ಸೌಂದರ್ಯವು ಯಾವ ಭಾವುಕನ ಮನಸ್ಸನ್ನಾದರೂ ಸೆರೆಹಿಡಿಯದಿರದು. ಈ ದೇವಾಲಯವು ಪಂಚಾಯತನ ಆರಾಧನೆಗೆ ತಕ್ಕಂತೆ ನಿರ್ಮಿತವಾದುದೆಂದು ಹೇಳಬಹುದು, ಎಂದರೆ ಪ್ರಧಾನ ದೇವತೆ ಈಶ್ವರನಾಗಿದ್ದರೆ, ಪಂಚದುರ್ಗಾ, ಗಣಪತಿ, ಆದಿತ್ಯ ಮತ್ತು ವಿಷ್ಣು ಉಪಸ್ಥಾನ ದೇವತೆಗಳಾಗಿವೆ. ಇಲ್ಲಿ ಒಂದು ವೈಶಿಷ್ಟ್ಯವಿದೆ. ಸೂರ್ಯನು ಕೃಷ್ಣನ ರೂಪದಲ್ಲಿ ಆರಾಧಿತನಾಗಿರುವುದು ಮಾತ್ರವಲ್ಲದೆ, ದುರ್ಗೆಯು ಐದುಲಿಂಗದರೂಪದಲ್ಲಿ ಒಂದೇ ಪಾಣಿಪೀಠದ ಮೇಲೆ ಪ್ರತಿಷ್ಠಾಪಿತವಾಗಿ ಆರಾಧಿತಳಾಗಿದ್ದಾಳೆ. ಇಂತಹ ದೃಷ್ಟಾಂತಗಳು ಹಲವೆಡೆದೊರಕಲಾರವು.

ಇಲ್ಲಿ ಇನ್ನೊಂದು ವೈಶಿಷ್ಟ್ಯವಿದೆ. ಇದನ್ನು ಪಂಡಿತರ ಹಾಗೂ ಸಂಶೋಧಕರ ಅವಗಾಹನೆಗೆ ತರುವುದೇ ಈ ಲೇಖನದ ಉದ್ದೇಶವಾಗಿದೆ. ದೇವಾಲಯದ ದಕ್ಷಿಣ ಪಾರ್ಶ್ವದಲ್ಲಿ ಸಪ್ತಮಾತೃಕೆಯರ ಸಂಪೂರ್ಣ ಶಿಲಾಮೂರ್ತಿಗಳಿವೆ (ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ ವಾರಾಹೀ, ಇಂದ್ರಾಣೀ,ಮತ್ತು ಚಾಮುಂಡೀ) ಸಂಪ್ರದಾಯದಂತೆ ಇಕ್ಕಡೆಗಳಲ್ಲಿ ವೀರಭದ್ರ ಮತ್ತು ಗಣಪತಿ ಬಿಂಬಗಳೂ ಇವೆ. ಮಾತ್ರವಲ್ಲದೆ ಸಾಂಪ್ರದಾಯಿಕವಲ್ಲದ ನಾಗನ ಪ್ರತಿಮೆಯೂ ಇದೆ. ಗನಾ ಎಂದರೆ ಸ್ಕಂದ—ಸುಬ್ರಹ್ಮಣ್ಯ--ಕಾರ್ತಿಕೇಯ. ಈ ಸ್ಕಂದನಿಗೆ ಸಪ್ತಮಾತೃಕೆಯರಲ್ಲ ಇದೇಕೆ ಸ್ಥಾನ ? ಸುಬ್ರಮಣ

---

ದಕ್ಷಿಣಕನ್ನಡದ ಉಳ್ಳಾಳದ ಸೋಮನಾಥೇಶ್ವರದ ಈಶ್ವರ ದೇವಾಲಯ ಅರಬ್ಬಿ ಸಮುದ್ರದ ತಟದಲ್ಲಿದ್ದು ಪ್ರಕೃತಿ ಸೌಂದರ್ಯದ ಆವಾಸ ಸ್ಥಾನವಾಗಿದೆ. ಇಲ್ಲಿನ ಸಪ್ತಮಾತೃಕೆಯರ ಸುಂದರ ಶಿಲಾಪ್ರತಿಮೆಗಳು ವೈಶಿಷ್ಟಪೂರ್ಣವಾಗಿವೆ ಹಾಗೂ ಭಾವುಕರ ಮನಸ್ಸನ್ನು ಸೆರೆಹಿಡಿಯುತ್ತವೆ. ಈ ದೇವಳದ ವೈಶಿಷ್ಟ್ಯ ಅಖಿಲ ಕರ್ನಾಟಕದ ಮಹತ್ವದ್ದೆನ್ನಬಹುದು.

---

ಸಹಿತ ಸಪ್ತಮಾತೃಕಾರಾಧನೆಯೇ ವಿಶೇಷತೆಯುಳ್ಳದ್ದೂ ಪ್ರಾಚೀನತೆಯುಳ್ಳ ಸಂಸ್ಕೃತಿಯ ಕುರುಹು ಆಗಿದೆ. ("ಕರ್ನಾಟಕ ವಿಶ್ವವಿದ್ಯಾನಿಲಯದ ಡಾ. ಅ. ಸುಂದರ ಅವರು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಯಾವಗಲ್ಲಿನ ವೀರಭದ್ರ ದೇವಾಲಯದಲ್ಲಿ ನಾಗ ಸಹಿತ ಸಪ್ತಮಾತೃತೆಯರ ಶಿಲಾಬಿಂಬಗಳ ಬಗೆಗೆ ಕರ್ನಾಟಕ ಭಾರತಿ" ಯಲ್ಲಿ ವಿಶೇಷವಾದ ಲೇಖನವನ್ನು ಬರೆದಿದಿರುವರು)

ಸೋಮನಾಥೇಶ್ವರದ ಈ ಸಪ್ತಮಾತೃಕಾ ಬಿಂಬಗಳು ಪ್ರತಿಯೊಂದೂ 16 ಅಂಗುಲ ಎತ್ತರವಾಗಿದ್ದು ಲಲಿತಾಸನದಲ್ಲಿವೆ. ಅವುಗಳ ವಾಹನಗಳನ್ನು ತೋರಿಸಿಲ್ಲ. ಎಲ್ಲವೂ ಚತುರ್ಬಾಹು ಬಿಂಬಗಳು. ಶಿಲ್ಪಲಕ್ಷಣಗಳನ್ನು ಅವಲೋಕಿಸಿದರೆ ಹಾಗೂ

ದೇವಾಲಯದ ವಾಸ್ತು ಶಿಲ್ಪವನ್ನು ಪರಿಶೀಲಿಸಿದರೆ ಈ ಮೂರ್ತಿಗಳನ್ನು ಕ್ರಿ. ಶ.10-11 ನೇ ಶತಮಾನಕ್ಕೆ ಅನ್ವಯಿಸಬಹುದು. ಮಾತ್ರವಲ್ಲದೆ ಈ ಬಿಂಬಗಳೂ ಅಖಿಲ ಕರ್ನಾಟಕ ಮಹತ್ವದ್ದೆನ್ನಬಹುದು.

ದಕ್ಷಿಣ ಕನ್ನಡದಲ್ಲಿ ಬಾದಾಮಿ ಚಾಳುಕ್ಯರ ಆಳ್ವಿಕೆ ಇತ್ತೆಂಬುದನ್ನು ಇಲ್ಲಿ ನೆನವರಿಕೆಮಾಡಿಕೊಳ್ಳಬೇಕು. ಬಾದಾಮಿ ಚಾಳುಕ್ಯರು ಸಪ್ತಮಾತೃಕೆಯರ ಆರಾಧನೆಗೆ ಹೆಚ್ಚಿನ ಮಹತ್ವವನ್ನುತ್ತಿದ್ದರು ಮಾತ್ರವಲ್ಲದೆ ತಮ್ಮ ಹಲವಾರು ಶಾಸನಗಳಲ್ಲಿ ಕಾರ್ತಿಕೇಯ ಸಹಿತ ಸಪ್ತ ಮಾತೃಕೆಯರಿಂದ ರಕ್ಷಿಸಲ್ಪಟ್ಟವರೆಂದು ಕರೆದುಕೊಳ್ಳುತ್ತಿದ್ದರು, ಈ ಪ್ರಾಚೀನ ಸಂಪ್ರದಾಯಕ್ಕೆ ಅತ್ಯತ್ಯುಷ್ಟವಾದ ದೃಷ್ಟಾಂತ ಬಂಟವಾಳ ತಾಲ್ಲೂಕಿನ ಪೊಳಲಶ್ರೀ ರಾಜರಾಜೇಶ್ವರೀ ದೇವಾಲಯದಲ್ಲಿ ದೊರಕುತ್ತದೆ. ಈ ದೇಗುಲದ ಪ್ರಧಾನ ದೇವತೆಯಾದ ಶ್ರೀ ರಾಜರಾಜೇಶ್ವರಿಯು ಕೌಮಾರಿಯಾಗಿದ್ದು ಸ್ಕಂದ (ಸುಬ್ರಹ್ಮಣ್ಯ) ಮತ್ತು ಗಣಪತಿ ಹಾಗೂ ಚಾಮುಂಡಾ ಸಹಿತ ಆರಾಧಿತಳಾಗಿರುವುದು ಅಖಿಲ ಕರ್ನಾಟಕ ಮಹತ್ವದ್ದೇ ಆಗಿದೆ. ಸಪ್ತಮಾತೃಕಾ ದೇಗುಲವಾಗಲೀ ಸಪ್ತಮಾತೃಕೆಯರಲ್ಲಿ ಯಾವುದೇ ದೇವತೆಯ ದೇಗುಲವಾಗಲೀ ಹಳೆಗಾಲದ ಸಂಪ್ರದಾಯವೆನ್ನಬಹುದು.

ದಕ್ಷಿಣ ಕನ್ನಡದಲ್ಲಿ 'ನಾಗ' ಪೂಜೆ ಸುಬ್ರಹ್ಮಣ್ಯ ಆರಾಧನೆ—ಇವೆರಡೂ ಅಭೇದ್ಯ. ಈ ಹಳೆಸಂಪ್ರದಾಯ ಈ ಜಿಲ್ಲೆಯಲ್ಲಿ ಇಂದಿಗೂ ಉಳಿದುಬಂದಿದೆ. ನಾಗನ ಹುತ್ತಕ್ಕೇನೆ ಪೂಜೆಮಾಡುವುದು. ಸುಬ್ರಹ್ಮಣ್ಯನ ಪೂಜೆ ಮಾಡಿದಂತೆ. ಸುಬ್ರಹ್ಮಣ್ಯ ದೇವರ ಉತ್ಸವ ಮೂರ್ತಿ ಸರ್ಪ ( ನಾಗ )

ಸುರುಳೀ ಹಾಕಿದ ನಾಗನ ಪ್ರತಿಮೆಯ ಮಧ್ಯೆ ಕಮಲದ ನಿರ್ದೇಶವಿರುವುದೂ ಇದೆ. ಕಮಲಸುಬ್ರಹ್ಮಣ್ಯ ಸಂಕೇತ ನಾಗ-ಸುಬ್ರಹ್ಮಣ್ಯ ಏಕತೆಯುಳ್ಳದ್ದೆಂಬುದಕ್ಕೆ ಇದು ದೃಷ್ಟಾಂತ. ನಾಗನಲ್ಲಿ ಶಕ್ತಿಯ ( ದುರ್ಗಾ ) ರೂಪವಿದೆ ಎಂದೂ ಭಾವನೆ ಇದೆ. ( ನಾಗಕನ್ನಿಕಾ ) ಆದುದರಿಂದ ಸಾರ್ವತ್ರಿಕ ಮಹತ್ವವುಳ್ಳ ಸುಬ್ರಹ್ಮಣ್ಯ ( ನಾಗ ) ನನ್ನು ಶಕ್ತಿಯ ಪ್ರಾಚೀನ ರೂಪಗಳಾದ ಸಪ್ತಮಾತೃಕೆಯರೊಡನೆ ಆರಾಧ ಮಾಡುವುದು ಮಹತ್ವ ಪೂರ್ಣವಾದ ಹಳೇ ಸಂಕೇತ. ಸುಮಾರು ಕ್ರಿ. ಶ. 11ನೇ ಶತಮಾನದ ಅನಂತರ ಈ ಸಂಪ್ರದಾಯ ಮಾಯವಾಯಿತೆಂದು ಹೇಳಬಹುದು. ಉತ್ತರ ಭಾರತದಲ್ಲಿ ಗುಪ್ತರ ಕಾಲದಲ್ಲಿ ಈ ಸಂಪ್ರದಾಯ ಬಳಕೆಯಲ್ಲಿತ್ತೆಂದು ಸಾಧಾರವಾಗಿ ಹೇಳಬಹುದು.

( ಸ್ಕಂದಪ್ರಧಾನೈರ್ಭುವಿಮಾತೃಭಿಶ್ಚ ) —

## ಬಸವ ವಚನಾಮೃತ

ಎತ್ತೆತ್ತ ನೋಡಿದರತ್ತತ್ತ ನೀನೇ ದೇವಾ
ಸಕಲ ವಿಸ್ತಾರದ ರೂಹು ನೀನೇ ದೇವ!
ವಿಶ್ವತೋಚಕ್ಷು ನೀನೇ ದೇವ!
ವಿಶ್ವತೋಮುಖ ನೀನೇ ದೇವ!
ವಿಶ್ವತೋಬಾಹು ನೀನೇ ದೇವ!
ವಿಶ್ವತೋಪಾದ ನೀನೇ ದೇವ ಕೂಡಲ ಸಂಗಮದೇವ!

ಶಿವನು ವಿಶ್ವಮಯವಾದರೆ ವಿಶ್ವವೂ ಶಿವಮಯ! ಎಲ್ಲೆಡೆ ಅರಳಿ ಆವರಿಸಿರುವ ಶಿವದ ಕಣ್ಣಿನ ಕಾಂತಿಯಲ್ಲಿ ನಡೆದಾಡುವ ಅವರಿಗೆ ಎಲ್ಲರ ಕಣ್ಣಿನಲ್ಲಿ ಶಿವಕಾಂತಿ ಕಾಣುವುದು. ಎಲ್ಲೆಡೆ ಅಭಿಮುಖವಾಗಿರುವ ಶಿವ ಮುಖದಲ್ಲಿ ಮಾತಾಡುವ ಅವರಿಗೆ ಎಲ್ಲರ ಮುಖದಲ್ಲಿಯೂ ಶಿವಬಿಂಬ ಕಾಣುವುದು. ಎಲ್ಲೆಡೆ ತಮ್ಮನ್ನು ತಬ್ಬಿ ಹಬ್ಬಿರುವ ಶಿವಬಾಹುಗಳಲ್ಲಿ ತನ್ಮಯರಾಗಿರುವ ಅವರಿಗೆ ಎಲ್ಲರ ಬಾಹುಲತೆಗಳಲ್ಲೂ ಶಿವಾಲಿಂಗನವೇ ಅನುಭವಕ್ಕೆ ಬರುವುದು. ಎಲ್ಲೆಡೆ ಅಂಕಿತವಾಗಿರುವ ಶಿವನ ಹೆಜ್ಜೆಯ ಗುರುತನ್ನೇ ಅನುಸರಿಸಿ ಗಮಿಸುವ ಬಸವಣ್ಣನವರಿಗೆ ಜಂಗಮ ಲೋಕದ ಪಾದಪರಿಚರ್ಯೆಯೇ ತಮ್ಮ ಪವಿತ್ರ ಚರ್ಯೆಯೆನಿಸುವುದು. ಎಲ್ಲವೂ ಶಿವನಲ್ಲಿರುವುದೆಂದು ಎಲ್ಲವನ್ನೂ ತಿರಸ್ಕರಿಸುವುದಲ್ಲ, ಎಲ್ಲದರಲ್ಲೂ ಶಿವನಿರುವನೆಂದು, ಎಲ್ಲವನ್ನೂ ಪುರಸ್ಕರಿಸುವುದೇ ನಿಜವಾದ ವಿಶ್ವರೂಪ ದರ್ಶನ.

## SREE JAGADGURU RENUKACHARYA EDUCATION SOCIETY ( Estd. 1945 )

**Race Course Road Bangalore-9.**

Permanent Patron — Sree Jagadguru of Sree Rambhapuri Mutt

Under the auspices of this Society, the following three Colleges are run :—

| College | Courses of study |
|---|---|
| Sree Jagadguru Renukacharya :— | |
| 1. College of Science & Arts | PUC (Arts, Science & Commerce) B. A , and B. Sc. |
| 2. College of Law | LL. B. and Diploma in a) Company Law b) Labour Law |
| 3. Evening College of Commerce | PUC and B. Com. |

A Hostel is also provided for the Law College in Rajajinagar.

The President and members of the Society convey their tributes to revered Dr. Sree Sivakumara Swamiji and wish the function a success.

---

[ 8ನೇ ಪುಟದಿಂದ ]

ಯುವಂತೆ ಮಾಡಿದ್ದಾರೆ. ಪರಿಷತ್ತು ಕನ್ನಡ-ಕನ್ನಡ ನಿಘಂಟು, ಎರಡನೇ ಮುದ್ರಣವನ್ನು ಕಂಡಿದೆ. ಅಲ್ಲದೆ 1970 ರಲ್ಲಿ ಪರಿಷತ್ತಿನ 20 ವರ್ಷದ ಹುಟ್ಟು ಹಬ್ಬವನ್ನು ಅತ್ಯಂತ ವೈಭವದಿಂದ ಆಚರಿಸಲಾಯಿತು. ಇದರ ಸವಿನೆನಪಿಗಾಗಿ ಒಂದು ಬೃಹತ್ ಕಟ್ಟಡವನ್ನು ಕಟ್ಟಲಾಗಿದೆ. ಬೆಂಗಳೂರು, ಮಂಡ್ಯ, ಹಾಗೂ ಶಿವಮೊಗ್ಗದಲ್ಲಿ ಸಾಹಿತ್ಯ ಸಮ್ಮೇಳನವನ್ನು ನಡೆಸಿತು.

ಹೀಗೆ ಸಾಹಿತ್ಯ ಪರಿಷತ್ತು ಮುಗಿಲೆತ್ತರಕ್ಕೆ ಬೆಳೆಯುತ್ತಿದೆ. ಇಂದು ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕದ ಒಂದು ಪ್ರಬಲ ಸಾಂಸ್ಕೃತಿಕ ಕೇಂದ್ರವಾಗಿದೆ. ಇದೀಗತಾನೆ ಯಶಸ್ವಿಯಾಗಿ ಒಂದು ವಾರಗಳ ಕಾಲ ವಜ್ರಮಹೋತ್ಸವವನ್ನು ರಾಷ್ಟ್ರಮಟ್ಟದಲ್ಲಿ ಆಚರಿಸಿತು.

# ನಿಮಗೆ ಯಾವುದು ಸೂಕ್ತ!? ಆಯ್ದುಕೊಳ್ಳಿ! ಆರಂಭಿಸಿರಿ!!

ಸುಪ್ರಸಿದ್ಧ ಸುಕ್ಷೇತ್ರ ಸಿದ್ಧಗಂಗಾ. ಇಲ್ಲಿ ಎಡೆಬಿಡದೆ ನಡೆಯುತ್ತಿರುವ ತ್ರಿವಿಧ ದಾಸೋಹಗಳು ಎಲ್ಲೆಲ್ಲೂ ಜನಜನಿತ. ಸುಮಾರು ದಶಕಗಳ ಸಾರ್ವಜನಿಕ ಸೇವೆ ಎಲ್ಲರನ್ನೂ ಆಕರ್ಷಿಸಿದೆ; ಅವರ ಮೆಚ್ಚುಗೆಯನ್ನು ಪಡೆದಿದೆ.

ಮೆಚ್ಚಿದ ಮಹನೀಯರು ನಿಂತು ಬೆಂಬಲಿಸುತ್ತಿದ್ದಾರೆ. ಕೊಡುಗೈ ದೊರೆಗಳಾಗಿ ನೀಡುತ್ತಿದ್ದಾರೆ. ಅನೇಕರು ಅನೇಕ ವಿಧಗಳಲ್ಲಿ ಈ **ಬೃಹತ್ಪ್ರ**ಮಾಣದ ಮಹತ್ಕಾರ್ಯಕ್ಕೆ ನೆರವಾಗುತ್ತಿದ್ದಾರೆ. **"ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ"** ಎಂಬುದಾಗಿ **ಶ್ರೀ ಗಳವರೇ** ಸಾರಿ ಸಾರಿ ಹೇಳಿದ್ದಾರೆ. ದಾನಿಗಳ ದಾನ ಪವಿತ್ರ ಪಾತ್ರತ್ವವನ್ನು ಇಲ್ಲಿ ಹೊಂದುತ್ತದೆ. ಈ ಮಹಾಶಯರುಗಳಿಗೆ **'ಸಿದ್ಧಗಂಗಾ'** ತುಂಬು ಧನ್ಯವಾದಗಳನ್ನು ಅರ್ಪಿಸುತ್ತದೆ.

**ಧಾನ್ಯ ಸಂಗ್ರಹಣೆ:**

ಪ್ರತಿವರ್ಷ ಸುಗ್ಗಿಯಲ್ಲಿ ಇಂತಿಷ್ಟು ಧಾನ್ಯ ಮುಡುಪಾಗಿಡಿ.
ನೀವು ಬಂದಾಗ ತಂದು ಅರ್ಪಿಸಿರಿ, ಅಥವಾ ಕ್ಷೇತ್ರದ **ಪ್ರ**ತಿನಿಧಿಗಳು ಬಂದಾಗ ಒಪ್ಪಿಸಿರಿ
ನೀವು ನೀಡಿದ ತೆನೆಗಳು ಕೂಡಿ ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಧನ ಸಹಾಯ:**

ಪ್ರತಿ ತಿಂಗಳೂ ಯಥಾಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ
ನಿಮ್ಮ ಖಾತೆ ಇರುವ ಬ್ಯಾಂಕಿನಲ್ಲಿ ಶ್ರೀ ಕ್ಷೇತ್ರದ ಖಾತೆ ಇರುತ್ತೆ.
ಪ್ರತಿ ತಿಂಗಳೂ ನಿಮ್ಮ ಖಾತೆಯಿಂದ ಶ್ರೀಗಳವರ ಖಾತೆಗೆ ವರ್ಗಾಯಿಸಲು ಬ್ಯಾಂಕ್ ಮೇನೇಜರ್ ರವರಿಗೆ ಒಂದು ಪತ್ರ ಬರೆಯಿರಿ.
ನಿಮಗೆ ಶ್ರಮವಿಲ್ಲದೆ ನಿಮ್ಮ ಕಾಣಿಕೆ ಸಂದಾಯವಾಗುತ್ತದೆ.
ವರ್ಷಕ್ಕೊಮ್ಮೆ ನಿಮ್ಮಿಂದ ಸಂದಾಯವಾದ ಒಟ್ಟು ಕಾಣಿಕೆಯ ಬಗ್ಗೆ ಪತ್ರ ಬರುತ್ತೆ.

**ಕೂಡಿಟ್ಟು ಕಳುಹಿಸಿರಿ:**

ಒಂದೇ ಬಾರಿಗೆ ಇಂತಿಷ್ಟೆಂದು ದಾನ ನೀಡುವುದು ಹಲವರಿಗೆ ಅಸಾಧ್ಯ.
ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಒಂದು ಹುಂಡಿಯನ್ನು ನಿಮ್ಮ ಮನೆಯಲ್ಲಿಡಿರಿ,
ನಿತ್ಯ ಎಷ್ಟು ಸಾಧ್ಯವೋ ಅಷ್ಟನ್ನು ಹಾಕಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳಿಸಿರಿ.

ಯಾವುದೇ ಹಣ ಕಳಿಸುವವರು, ಎಂ. ಒ, ಅಥವಾ ಬ್ಯಾಂಕ್ ಡ್ರಾಫ್ಟ್ ಮೂಲಕ **ಶ್ರೀ ಶ್ರೀ ಶಿವಕುಮಾರಸ್ವಾಮಿಗಳು,** ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲಾ-**572131 ಇವರಿಗೆ** ನೇರವಾಗಿ ಕಳುಹಿಸಬೇಕು.

ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ **"ಶ್ರೀ ಸಿದ್ಧಗಂಗಾ"**. ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ ನಿತ್ಯದಾಸೋಹಕ್ಕೆ ವಿನಿಯೋಗವಾಗುತ್ತದೆ. ನೀಡಿರಿ ನಿತ್ಯಸಂತೋಷವನ್ನು ಹೊಂದಿರಿ.

**ಭಕ್ತಮಂಡಲಿ**
ಶ್ರೀ ಸಿದ್ಧಗಂಗಾ ಕ್ಷೇತ್ರ

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69





ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ